# ಕೊಡಗು ಸಂಗಾತಿ

ಅಕ್ಟೋಬರ್ 1 ರಿಂದ 31, 2002 ಪಾಕ್ಷಿಕ ಪತ್ರಿಕೆ ( ನಿರ್ಲಾಲ್ 15-31 ಬೊಂತಲ್ 1-14, )

1055c, ದೊಡ್ಡಣ್ಣ ಬಿಲ್ಡಿಂಗ್ಸ್, ಹುಣಸೂರು ರಸ್ತೆ, ಹಿನ್‌ಕಲ್ ಅಂಚೆ, ಮೈಸೂರು - ೫೭೦ ೦೧೭

ಸಂಪಾದಕಿ : ಪಟ್ಟಡ ಶೀಲಾಮಣಿ Registered : 10-01-96 TCI Kar. 09592 ಕನ್ನಡ ಮತ್ತು ಅರೆಗನ್ನಡ ಭಾಷೆಲಿ ಪ್ರಕಟಿತ

Reg. No. KA/SK/MYS-88 ಸಂಪುಟ : 6 ಸಂಚಿಕೆ : 13-14 ಪುಟಗಳು : 24 ಬೆಲೆ ರೂ. : 12-00



ದಕ್ಷಿಣ ಕಾಶಿಯ ಶ್ರೀ ಮೂಲ ತಲಕಾವೇರಿಯ ಉಗಮ ಸ್ಥಾನದ ದೃಶ್ಯ



ಲೇಖನ : ಒಳಪುಟದಲ್ಲಿ.

ರಾಷ್ಟ್ರಪತಿ ಅಬ್ದುಲ್ ಕಲಾಂ ಅವರಿಂದ ರಾಷ್ಟ್ರಪತಿ ಪ್ರಶಸ್ತಿ ಸ್ವೀಕರಿಸುತ್ತಿರುವ ಕೊಡಗಿನ ತೆಕ್ಕಡೆ ಜಯಶೀಲಾ ಮುತ್ತಣ್ಣ

ಕು॥ ಪೋರೆಯನ ಟಿ. ಉಷಾರಾಣಿ

## ರಾಷ್ಟ್ರಪತಿಗಳ "ಗೈಡ್ ಮತ್ತು ಸಿಸ್ಟರ್ ಹುಡ್" ವಿಜೇತೆ



(ಪೋರೆಯನ ತಮ್ಮಯ್ಯ ಮತ್ತು ದೇವಮ್ಮನವರ ಪುತ್ರಿ, ಪ್ರಸ್ತುತ ಉಡುಪಿ ಎಮ್. ಜಿ. ಎಮ್. ಕಾಲೇಜಿನಲ್ಲಿ ದ್ವಿತೀಯ ಪಿ. ಯು. ಸಿ. (PCMB) ವಿದ್ಯಾರ್ಥಿ.)

ಭಾರತೀಯ ಸ್ಕೌಟ್ಸ್ ಮತ್ತು ಗೈಡ್ ವಿಭಾಗದಲ್ಲಿ ರಾಷ್ಟ್ರಪತಿಗಳ "ಗೈಡ್ ಮತ್ತು ಸಿಸ್ಟರ್ ಹುಡ್" ಪ್ರಶಸ್ತಿ ಪಡೆದು ನಾಡಿಗೂ ಜನಾಂಗಕ್ಕೂ ಕೀರ್ತಿ ತಂದಿರುವ ನಿನಗೆ ಕುಲ ದೇವರು ವೆಂಕಟರಮಣನು ಉಜ್ವಲ ಭವಿಷ್ಯ ನೀಡಲೆಂದು ಸದಾ ಹಾರೈಸುವೆವು.

ನಿನ್ನ ಚಿಕ್ಕಪ್ಪ ಮತ್ತು ಚಿಕ್ಕಮ್ಮ
ಶ್ರೀ ಪೋರೆಯನ ಆನಂದ,ಮ್ಯಾನೇಜರ್ ಗೌಡ ವಿದ್ಯಾರ್ಥಿ ನಿಲಯ, ಮೈಸೂರು.
ಮತ್ತು ಶ್ರೀ ಮತಿ ಪೋರೆಯನ ಯಶೋಧಾ (ವೇಣು) ಶುಶ್ರೂಶಕಿ, ಮೈಸೂರು.
ಮೈಸೂರು : ದೂರವಾಣಿ : 0821/415983

---

**ಗೌಡ ಸಾಂಸ್ಕೃತಿಕ ಅಕಾಡೆಮಿಯಿಂದ "ಕೈಲ್‌ಪೋಳ್ದ್" ಹಬ್ಬ ಆಚರಣೆ ದಿನಾಂಕ 6-10-2002 ರಂದು ಭಾನುವಾರ, 10 ಗಂಟೆಗೆ ಸ್ಥಳ : ಗೌಡಸಮಾಜ ಮಡಿಕೇರಿ, ಸರ್ವರಿಗೂ ಸ್ವಾಗತ ಕೋರುವ ಅಧ್ಯಕ್ಷರ್ ಮತ್ತೆ ಆಡಳಿತ ಮಂಡಳಿಯವು.**

---

## ಕಾವೇರಿ ತೀರ್ಥೋದ್ಭವ

**ದಕ್ಷಿಣ ಕಾಶಿ ತಲಕಾವೇರಿಯಲ್ಲಿ ದಿನಾಂಕ 18-10-2002 ರ ಬೆಳಗ್ಗಿನ ಜಾವ 1 ಗಂಟೆ 21 ನಿಮಿಷಕ್ಕೆ ಶ್ರೀ ಕಾವೇರಿ ಮಾತೆಯು ತೀರ್ಥ ರೂಪಿಣಿಯಾಗಿ ಕಾಣಿಸಿಕೊಳ್ಳಲಿದ್ದಾಳೆ.**

**- ಸಂಗಾತಿ**

---



**"Jagruthi"**
**Pension Lane Madikeri, Ph : 228174**

## CONGRATULATIONS

Hearty Congratulations to **Ponnachana Srinivas** for bagging First Rank in B.P.Ed. from Mysore University (2001-002)

**Best Wishes from**

Parents : Ponnachana Kalappa & Radha
Sisters : Prathibha, Natolana Vinutha
Brother-in-law : Natolana Mahesh,
Relatives & Friends
Cousins : Nidhi, Nishi, Neha, Moulya.

---

ಲಕ್ಕನ್ ಪವನ್
ಜನನ 4-10-2001



## *ಹುಟ್ಟು ಹಬ್ಬದ ಶುಭಾಶಯಗಳು*

ನಿನ್ನ ಪ್ರಥಮ ವರ್ಷದ ಹುಟ್ಟು ಹಬ್ಬಕ್ಕೆ ಶುಭಾಶಯಗಳು,
(ಕಡ್ಲೇರ ಶ್ರೀಮತಿ ಗಾಯಿತ್ರಿ ಮತ್ತು ಶ್ರೀ ಬಸಪ್ಪನವರ ಪುತ್ರ.)

*ಅಜ್ಜ : ಕಡ್ಲೇರ ಚಿಣ್ಣಪ್ಪ ಬೆಂಗಳೂರು, ಅಜ್ಜಿ : ಕಡ್ಲೇರ ನೀಲಾವತಿ , ದೊಡ್ಡಪ್ಪ ದಯಾನಂದ ವಕೀಲರು, ಬೆಂಗಳೂರು, ದೊಡ್ಡಮ್ಮ ನವೀತ, ದೊಡ್ಡಪ್ಪ ಯಶೋಧ ಕುಮಾರ ಬೆಂಗಳೂರು. ದೊಡ್ಡಮ್ಮ ಸುಕನ್ಯ, ಅಕ್ಕಂದಿರಾದ ಗಾನವಿ, ರೋಚನ್ ಕಾವೇರಿ, ತೇಜಸ್ಸ್, ಅಜ್ಜ ಕೋಚನ ಗೋಪಾಲ ಅಜ್ಜಿ ವೆಂಕಟಲಕ್ಷ್ಮಿ.*

***Address : 64/24, Service Road, Ananda Nagar, Marthahalli, Bangalore - 57, Ph : 5234837, Bangalore.***



# 2002, ಅಕ್ಟೋಬರ್ 1 ರಿಂದ 31ರ ತನಕ

## ಒಳನೋಟ




| | |
|---|---|
| ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | ಕೊಡಗು ಸಂಗಾತಿ, 1055c, ದೊಡ್ಡಣ್ಣ ಬಿಲ್ಡಿಂಗ್, ಹುಣಸೂರು ರಸ್ತೆ, ಅಂಚೆ ಕಛೇರಿ ಎದುರು, ಹಿನಕಲ್ ಅಂಚೆ, ಮೈಸೂರು - 17.ಫೋನ್:**0821/404290** |
| ಮಡಿಕೇರಿಯಲ್ಲಿ ಸಂಗಾತಿ ಕಛೇರಿ ಚಿಹ್ನೆ, ಹಸೆಮಣೆ / ಶುಭಾಶಯ ಕಾರ್ಡ್ಸ್ / ಕ್ಯಾಸೆಟ್ಸ್ ಕೀ ಚೈನ್ ಲಭ್ಯ | ಬೈತಡ್ಕ ಜಾನಕಿ ಬೆಳ್ಯಪ್ಪ,, ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, ಫೋನ್ : **08272/228047** |
| | ಚೆರಿಯಮನೆ ರಮೇಶ್, C/o ಪಾಂಡ್ಯನ್ ಕ್ಯಾಸೆಟ್ ಅಂಗಡಿ, ಖಾಸಗಿ ಬಸ್ ನಿಲ್ದಾಣ, ಮಡಿಕೇರಿ, ಫೋನ್ : 08272/229620 |
| ವಿರಾಜಪೇಟೆ | ಚಾರಿಕೆ ಮನೋಜ್‌ಕುಮಾರ್, ಇಗ್ಗುತ್ತಪ್ಪ ಕೋಲ್ಡ್ ಸ್ಟೋರ್, ಖಾಸಗಿ ಬಸ್ ನಿಲ್ದಾಣ, ವೀರಾಜಪೇಟೆ ಫೋನ್ : 08274/456591 |
| ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೆಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/673370 |
| ಬೆಂಗಳೂರು ಮಹಾನಗರ | ಕಲ್ಲುಮುಟ್ಲು ಬಸಪ್ಪ, ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು -19, ಫೋನ್ : 080/6500946 |

ಚಂದಾ ವಿವರ : ಜೀವಾವಧಿ ಸದಸ್ಯತನ - **2000** ರೂ., ಬಿಡಿ ಪ್ರತಿ - **12**ರೂ.

ವಾರ್ಷಿಕ ಚಂದಾ - 150 ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ :1837 ರಲ್ಲಿ ಕೊಡಗಿನ ಮಣ್ಣಿನಲ್ಲಿ ಪ್ರಥಮ ಸ್ವಾತಂತ್ರ್ಯ ದಂಗೆಯ ಕಿಡಿ

## ದಂಡನಾಯಕ ಹುತಾತ್ಮ ಗುಡ್ಡೇಮನೆ ಅಪ್ಪಯ್ಯ ಗೌಡರು

ಪರಕೀಯರು ಭಾರತದ ಮಣ್ಣನ್ನು ಒಂದೊಂದಾಗಿ ತನ್ನ ಬಗಲೊಳಗೆ ಹಾಕಿ ಕೊಂಡಾಗಲೆ ಪ್ರಾರಂಭವಾಯಿತು, ಭಾರತದ ಮಣ್ಣಿನಲ್ಲಿ ಕ್ರಾಂತಿಯ ಕಿಡಿಗಳು ಅಲ್ಲಲ್ಲಿ ಭುಗಿಲೇಳುತ್ತಾ ಬಂದವು. ಹೀಗೆ 1834 ಸುಮಾರಿಗೆ ಭಾರತದ ಹೆಚ್ಚಿನ ಭಾಗಗಳು ಒಂದಲ್ಲ ಒಂದು ರೀತಿಯಲ್ಲಿ ಬ್ರಿಟಿಷರ ಗುಲಾಮಗಿರಿಯ ಸ್ವಾಧೀನಕ್ಕೆ ಬಂದಿದ್ದವು. 1834 ರಲ್ಲಿ ದೇಶಿಯರ ಪಿತೂರಿಯಿಂದ ಬ್ರಿಟಿಷ್ ರೆಸಿಡೆಂಟ್ ಕರ್ನಲ್ ಪ್ರೇಸರನ ನಾಯಕತ್ವದಲ್ಲಿ ಅಂದಿನ ವಿಶಾಲ ಕೊಡಗು ಬ್ರಿಟಿಷರ ವಶವಾಗಿದ್ದು? ನಂತರದ ದಿನಗಳಲ್ಲಿ ಸ್ವಾತಂತ್ರ್ಯದ ಕಿಡಿಯು ಕೊಡಗಿನ ಮತ್ತು ಕನ್ನಡ ಜಿಲ್ಲೆಗಳಲ್ಲಿ ಭುಗಿಲೆದ್ದು 1837 ರ ಏಪ್ರಿಲ್‌ನಲ್ಲಿ ಸುಮಾರು 2 ವಾರಗಳ ತನಕ ಈ ಪ್ರಾಂತ್ಯಗಳನ್ನು ಬ್ರಿಟಿಷರಿಂದ ಕಿತ್ತು ತನ್ನ ಸ್ವಾಧೀನದಲ್ಲಿಟ್ಟು ಆಳಿದ ಸಂದರ್ಭ ವನ್ನು ಇಂದು ನೆನೆದಾಗ ಪ್ರತಿಯೊಬ್ಬ ಕೊಡಗಿನ ವೀರ ಕಲಿಯರ ಮೈನವಿರೇಳಿಸುವುದು.

ಆದರೆ ಅಂದು ಕೊಡಗಿನ ಸ್ವಾತಂತ್ರ್ಯಕ್ಕಾಗಿ ವೀರಾವೇಶದಿಂದ ಕಾದಾಡಿದ ಶೂರರು, ಶೂರ ವಂಶಸ್ಥರು ಮನೆತನಗಳು ಇಂದು ಕೊಡಗಿನಲ್ಲಿದ್ದು ಜೀವನ ಸಾಗಿಸುತ್ತಿರುವುದು ಕಾಣುತ್ತಿದೆ. ಅದರಂತೆಯೇ ಹಲವರು ಬ್ರಿಟಿಷರ ಗುಲಾಮರಾಗಿ ಬ್ರಿಟಿಷರ ಬಾಲ ಬುಡುಕರಾಗಿ ಅವರ ಹಿಂಬಾಲಕರಾಗಿ ಅವರ ಸತ್ಯಂಪ್ರದಾಯವಲ್ಲದೆ, ಪ್ರತ್ಯೇಕತೆಗೆ ಮನ್ನಣೆಯಿಕ್ಕುವ ಗಟ್ಟಿಕುಳಲ್ಲದೆ ಇನ್ನು ಹಲವಾರು ಮನೆತನಗಳು ಹಾಗೂ ಇತರರು ಅನೋನ್ಯವಾಗಿ ವಾಸಿಸುತ್ತಿರುವುದು ನಾವಿಂದು ಕಾಣುತ್ತಿದ್ದೇವೆ.

ದೇಶಕ್ಕೆ ಸ್ವಾತಂತ್ರ್ಯ ಬಂದ ತರುವಾಯ ಇಬ್ಬರು ಮಹಾ ದಂಡನಾಯಕರುಗಳನ್ನು ನೀಡಿದ ಕೊಡಗು ನಾಡು ನಂತರದ ದಿನಗಳಲ್ಲಿ ಹಲವು ಗಣ್ಯ ವ್ಯಕ್ತಿಗಳನ್ನು ಮತ್ತು ಹಲವು ವೀರ ಯೋಧರನ್ನು ಭಾರತಾಂಬೆಯ ಸೇವೆಗೆ ಕಳುಹಿಸಿದೆ. ಭಾರತದ ಭೂ ಪಟಲದಲ್ಲಿ ಕೊಡಗಿಗೊಂದು ರಕ್ಷಣಾ ಕ್ಷೇತ್ರದಲ್ಲಿ ಖಾಯಂ ಸ್ಥಾನವಿರುವುದು ಸಂತಸಕರ.

ಹೀಗಿದ್ದೂ ಸಹ 1837ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮಕ್ಕೆ ಹೆಚ್ಚಿನ ಮಹತ್ವವನ್ನು ಜನರಾಗಲಿ ಸರಕಾರವಾಗಲಿ ನೀಡಿದ ಉದಾಹರಣೆ ಕಂಡುಬರುವುದಿಲ್ಲದಿರುವುದೂ ತೀರಾ ದುರದೃಷ್ಟವೆನ್ನಬೇಕು. ಕೊಡಗಿನ ಚರಿತ್ರೆಯಲ್ಲಿ ಅಮರ ಸುಳ್ಯಕಾಟಿಕ್ಕಾಯಿ ಎಂದು ಕರೆದು ಮೂಲೆ ಗುಂಪು ಮಾಡಿದ್ದು ನಿಜಕ್ಕೂ ತುಂಬಾ ನೋವಿನ ಸಂಗತಿಯೇ ಸರಿ. ಬ್ರಿಟಿಷರು ಇದನ್ನು "ಕೆನರಾ ಬಂಡಾಯ"ಎಂದು ಪ್ರಥಮ ಸ್ವಾತಂತ್ರ್ಯ ಬಂಡಾಯ ವೆಂದು ಕರೆದಿರುವುದನ್ನೂ ನೋಡಿದರೆ ನಮ್ಮವರ ಅಂದಿನ ಕೆಚ್ಚಿನ, ಕ್ರೌರ್ಯದ ಪರಾಕ್ರಮದ ಅರಿವಾಗುತ್ತದೆ.

ಆದರೆ ಕೊಡಗಿನ ಜನತೆಗೆ ಅದೇಕೊ ಆ ರೀತಿಯಲ್ಲಿ ಕರೆಯಿಸಿಕೊಳ್ಳುವುದು ತೀರ ಅಪಥ್ಯವೆನಿಸಿದಂತೆ ಕಾಣುವುದು.

1837ರ ಅಕ್ಟೋಬರ್ 31 ರಂದು ತನ್ನ ತಾಯಿ ನೆಲದಲ್ಲಿಯೇ ಕೊಡಗಿನ ಸ್ವಾತಂತ್ರ್ಯ ದಂಗೆಯ ರುವಾರಿ ಕೆನರಾ ಬಂಡಾಯದ ವೀರ, ದೇಶಭಕ್ತನಾಗಿ,ದೇಶಕ್ಕಾಗಿ ಹೋರಾಡಿ ತ್ಯಾಗ ಮಾಡಿದ ಹುತಾತ್ಮ ವೀರನ ಕತೆಯನ್ನು ನೆನಪಿಸುವ ಮಹಾ ಸುದಿನ, ಅಂದು ಬೆಳಗಿನ ಹೊತ್ತು 10 ಗಂಟೆಗೆ ಈಗಿನ ಮಡಿಕೇರಿ ಕೋಟೆಯ ಮುಂಭಾಗದ ಬಾವಿ ಕಟ್ಟೆಯಲ್ಲಿ ನೇಣು ಗಂಬಕ್ಕೆ ಏರಿಸಿದ್ದು ಇಂದು ಚರಿತ್ರಾರ್ಹವೇ ಸರಿ.

ಬ್ರಿಟಿಷರ ಆಣತಿಯಂತೆ ನೇಣುಗಂಬಕ್ಕೆ ಏರುವ ಮುನ್ನ ಕೊಡಗಿನ ಉಡುಪಾದ ದಟ್ಟಿ ಕುಪ್ಪಸ, ರುಮಾಲು ಅನ್ನೂ ಅಪ್ಪಯ್ಯಗೌಡರ ಧರ್ಮಪತ್ನಿ ಕಾವೇರಮ್ಮನವರಿಂದ ಸ್ವತಹ ತರಿಸಿಕೊಂಡು ಬರುವಾಗ ಮೈದುನ ಪೊನ್ನಪ್ಪನವರು ಬಲಂಬೇರಿಯಿಂದ ಬಂದಿದ್ದರು. ಕಾವೇರಮ್ಮನವರು ಗೌಡರ ಹಳೆ ಕಾಲದ ಪದ್ಧತಿಯಂತೆ ಧಾರೆ ಸೀರೆಯುಟ್ಟು, ಸೊಂಟಕ್ಕೆ ಬೆಳ್ಳಿ ಡಾಬನ್ನು ಸಿಕ್ಕಿಸಿ ಬಂದಿದ್ದರು. ಅಂದು ಬ್ರಿಟಿಷರು ಸರ್ವನಾಡ ಪಟೇಲರನ್ನು ಬರಹೇಳಿಸಿ, ಅಪ್ಪಯ್ಯಗೌಡರ ಧರ್ಮಪತ್ನಿ ಕಾವೇರಮ್ಮ ಮತ್ತು ಸಹೋದರ ಪೊನ್ನಪ್ಪನವರ ಕಣ್ಣೆದುರಿನಲ್ಲಿಯೇ ನೋಡು ನೋಡುವಂತೆಯೇ ನೇಣುಗಂಬಕ್ಕೆ ಏರಿಸಿದರು. ಅಪ್ಪಯ್ಯಗೌಡರು ಜನಾಂಗಕ್ಕಾಗಿ ನಾಡಿಗಾಗಿ ಅಂದು ವೀರ ಸ್ವರ್ಗ ಪಡೆದು ಹುತಾತ್ಮರಾದರು.

ಇವರಲ್ಲದೆ ಇನ್ನೂ ಹನ್ನೆರಡು ಜನರಿಗೆ ಶಿಕ್ಷೆಯನ್ನು ವಿಧಿಸಲಾಯಿತು. ಇವರಲ್ಲಿ ಗಾಳಿಬೀಡಿನ ಚೆಟ್ಟಕುಡಿಯ ಮತ್ತು ಕುರ್ತುಕುಡಿಯ, ಶಾಂತಳ್ಳಿ ಮಲ್ಲಯ್ಯ, ಪೆರಾಜೆಯ ಪಾರು ಪತ್ಯೆಗಾರ ಕೃಷ್ಣಯ್ಯ, ನಾಲ್ಕು ನಾಡಿನ ಮಂಡಿರ ಉತ್ತಯ್ಯಾ, ಗುಡ್ಡೆಮನೆ ತಮ್ಮಯ್ಯ ಗೌಡರಿಗೆ 7 ರಿಂದ 17 ವರ್ಷಗಳ ಶಿಕ್ಷೆಯಲ್ಲದೆ ಇವರಲ್ಲಿ ಕೆಲವರಿಗೆ ಗಲ್ಲು ಶಿಕ್ಷೆನೀಡಲಾಯಿತು. ಅವರುಗಳೆಂದರೆ ಸುಳ್ಯದ ಪ್ರಮುಖ, ದಂಗೆಯ ರುವಾರಿ ಕೆದಂಬಾಡಿ ರಾಮಗೌಡ್ರು, ಕೃತಕ ರಾಜ ಕಲ್ಯಾಣಸ್ವಾಮಿ ಪುಟ್ಟಬಸಪ್ಪ, ಅಡ್ಕಾರು ಅಂಣೆಗೌಡ, ಮಂಗಳೂರಿನ ಬಂಗರಾಜ ಇನ್ನು ಹಲವರು. ಇವರನ್ನುಬಿಕ್ಕನ ಕಟ್ಟೆಯಲ್ಲಿ ಗಲ್ಲಿ ಗೇರಿಸಲಾಯಿತು.

ಕೊಡಗು ಸೈನ್ಯದ ಕೆಲವರಲ್ಲಿ ಕೋವಿ, ಖಡ್ಗ, ಗುರಾಣಿ, ಕತ್ತಿ, ಈಟಿ, ಭರ್ಜಿ, ಕೊತ್ತಳಿಗೆ, ದೊಣ್ಣೆ, ಬಡಿಗೆಗಳಿದ್ದವು. ಅಂಬಲಿ ಬಿಸಿ ಮಾಡಿ ಮೈಮೇಲೆ ಎರಚುವ ಮತ್ತುಬಿದಿರಿನ ಗಂಟುಗಳಿರುವ ಚಿಕ್ಕ ತುಂಡುಗಳಿಂದ ಮಾಡಿದ ವಸ್ತುವನ್ನು ನೆಲಕ್ಕೆ ಹೂತು ಕುದುರೆ ಗೊರಸು ಸಿಕ್ಕಿ ಬೀಳುತ್ತಿದ್ದಾಗ ಎರಗುವ ಏರ್ಪಾಡು ಸಹ ಇತ್ತು. 6-7 ಅಡಿಗಳ ಉದ್ದದ ಮರದ ಚೂಪಾದ ಬಡಿಗೆಗಳಿಂದಲೂ, ಕೆಲವರು ಕವಣೆ ಕಲ್ಲು ಇತ್ಯಾದಿಗಳಿಂದ ಬ್ರಿಟಿಷ್ ಸೈನ್ಯವನ್ನು ಎದುರಿಸಿದ್ದುದ್ದನ್ನು ಊಹಿಸಿ ಕೊಂಡಾಗ "ಗೆರಿಲ್ಲಾ ಯುದ್ಧ"ದಲ್ಲಿ ನಮ್ಮ ಹಿರಿಯರು ಎಷ್ಟೊಂದು ಪರಿಣಿತರು ಎಂಬ ಅಂಶವನ್ನು ಸಾಭಿತು ಪಡಿಸುತ್ತದೆ. ಸೈನಿಕರಲ್ಲಿ ಹೆಚ್ಚಿನದಾಗಿ ಗೌಡರು ಭಾಗವಹಿಸಿದ್ದರು. ಅಲ್ಲದೆ ಬಂಟರು, ಕುಡಿಯರು, ಅಜಲರು, ಪಾಲೆಯರು, ಮಳೆಯಾಳಿ ನಾಯರುಗಳು, ನಾಯ್ಕರುಗಳು ಮಾಪಿಳ್ಳೆಯರು, ಕೊಂಕಣಿಗಳು, ಬ್ರಾಹ್ಮಣರು, ಉಳಿದಂತೆ ಕೆಲ ಮಂದಿ ಕೊಡಗರು ಸಹ ಇದ್ದರೆನ್ನುವುದು ಸತ್ಯ ಸಂಗತಿ. ಕರ್ನಾಟಕ ರಾಜ್ಯದ ಸ್ವಾತಂತ್ರ್ಯ ಹೋರಾಟಗಾರರ

ಇತಿಹಾಸದಲ್ಲಿ ಅಪ್ಪಯ್ಯಗೌಡರ ಹೆಸರು ದಾಖಲಾಗಿರುವುದನ್ನು ನಾವಿಂದು ಕಾಣಬಹುದು.

ಆದ್ದರಿಂದ ಕೊಡಗಿನ ಸರ್ವ ಜನತೆ ಈಗಲಾದರು ಎಚ್ಚೆತ್ತು, ಸರ್ಕಾರ, ಸಂಘ ಸಂಸ್ಥೆ ಮೊದಲ್ಗೊಂಡು ಎಲ್ಲರು ಒಟ್ಟಾಗಿ ಮಡಿಕೇರಿಯಲ್ಲಿ ಎಲ್ಲಿ ಗುಡ್ಡೆ ಮನೆ ಅಪ್ಪಯ್ಯನವರು ನೇಣುಗಂಬ ಏರಿದರೊ ಅದೇ ಸ್ಥಳದಲ್ಲಿ ಬಲಿದಾನವಾದ ಕೊಡಗಿನ ಪ್ರಥಮ ಸ್ವಾತಂತ್ರ್ಯ ಹೋರಾಟಗಾರ ಹುತಾತ್ಮ ಅಪ್ಪಯ್ಯ ಗೌಡರ ಮತ್ತು ಗಲ್ಲಿಗೇರಿಧ ಉಳಿದ ವೀರರನ್ನೂ ನೆನಪಿಸುವ 'ವೀರಗಲ್ಲು' ಮತ್ತು 'ವೀರ ವನ'ವನ್ನೂ ಸ್ಥಾಪಿಸುವುದು ಅಲ್ಲದೆ ಪ್ರತಿವರ್ಷವು ನೆನೆಯುವಂತಹ ಕಾರ್ಯಕ್ರಮವನ್ನು ಸರ್ಕಾರ ಮತ್ತು ಇಂದಿನ ಯುವ ಜನತೆ ಹಮ್ಮಿಕೊಂಡು ಮುಂದಾದಾಗಲೇ ಹುತಾತ್ಮರ ಆತ್ಮಕ್ಕೆ ಶಾಂತಿ ಸಿಗಬಹುದೆನ್ನುವ ಮಹದಾಶಯ ಸಂಗಾತಿಯದು.

## ಒಬ್ಬ ಸಮರ್ಥ ಸೆಕ್ರೆಟರಿಗೆ ಇರಬೇಕಾದ ಸಕರಾತ್ಮಕ ಅಂಶಗಳು :

ಇಂದು ಪೂರ್ಣ ಪ್ರಪಂಚವೆ ವ್ಯಾಪಾರಮಯ. ನಮ್ಮ ಯಾವುದೇ ಕಾರ್ಯ ಕಲಾಪಗಳು ಲಾಭವಿಲ್ಲದೆ ನಡೆಯುವುದಿಲ್ಲ. ಲಾಭ ಅಥವಾ ಸೇವೆ, ಯಾವುದೇ ಉದ್ದೇಶವನ್ನು ಇಟ್ಟುಕೊಂಡು ನಡೆಸುವ ಯಾವುದೆ ಕಾರ್ಯಕಲಾಪಗಳು ಒಬ್ಬನಿಂದ ನಡೆಸುವುದು ಅಸಾಧ್ಯ! ಪ್ರತಿಯೊಬ್ಬ ಮುಖ್ಯಸ್ಥನಿಗೂ, ಅವನ ವ್ಯವಹಾರಿಕ ಬದುಕನ್ನು ಸರಳ, ಸುಂದರವಾಗಿ ನಡೆಸಿಕೊಂಡು ಹೋಗಲು, ಅವನ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲು, ಅನಗತ್ಯ ಕಾರ್ಯಗಳನ್ನು ಜರಡಿ ಹಿಡಿಯಲು ಒಬ್ಬ ಸಮರ್ಥ ಆಪ್ತ ಸಹಾಯಕಿ/ಕ (Secretary) ಬೇಕೆ ಬೇಕಾಗುತ್ತದೆ.

ಸೆಕ್ರೆಟರಿ ಅಂದರೆ (The one who keeps Secret) ಮುಖ್ಯಸ್ಥನ ಕಾರ್ಯ ಕಲಾಪಗಳನ್ನು ಬೇರೆಯವರಿಂದ ಗೌಪ್ಯವಾಗಿಡುವವನು/ಳು. ಆದರೆ ಸೆಕ್ರೆಟರಿಯ ಕೆಲಸ ಇಷ್ಟಕ್ಕೆ ಸೀಮಿತವಲ್ಲ. ಅವಳ ಕೆಲಸ ಮುಖ್ಯಸ್ತನ ವ್ಯವಹಾರಿಕ ಚಟುವಟಿಕೆ ಮೇಲೆ ಅವಲಂಬಿತವಾಗಿರುತ್ತದೆ. ಅವಳದು ಚಟುವಟಿಕೆಯುಳ್ಳ ಕೆಲಸ. ಅವಳ ಕೆಲಸವನ್ನು ಅವಳು ಸರಿಯಾಗಿ ಮಾಡಿದ್ದೆ ಆದರೆ, ನಿರಂತರವಾಗಿ ಅವಳು ಹೆಚ್ಚು- ಹೆಚ್ಚು ವ್ಯವಹಾರಿಕ ಕರ್ತವ್ಯಗಳನ್ನು ತೆಗೆದುಕೊಳ್ಳುತ್ತಾ ಹೋಗುತ್ತಾಳೆ. ಅಂತಹ ಒಬ್ಬ ಸಮರ್ಥ ಸೆಕ್ರೆಟರಿಗೆ ಇರಬೇಕಾದ ಪ್ರಮುಖ ಅಂಶಗಳು.

1. ಸೆಕ್ರೆಟರಿಯ ಕೆಲಸ "ಟೈಪಿಸ್ಟ್" "ಸ್ಟೆನೊಗ್ರಾಪರ್" ಹೀಗೆ ಯಾವುದೇ ಒಂದಕ್ಕೆ ಸೀಮಿತವಾಗಿರುವುದಿಲ್ಲ. ವ್ಯವಹಾರಿಕ ಬದುಕಿನಲ್ಲಿ ಅವಳು ವಿಶಾಲವಾದ ಪಾತ್ರವನ್ನು ವಹಿಸುತ್ತಾಳೆ.

2. ಸಾಮಾನ್ಯವಾಗಿ ಮಹಿಳೆ ಸಕ್ರೆಟರಿಯಾಗಿರುತ್ತಾಳೆ. ಅವಳು ಮುಖ್ಯಸ್ತನ ಅಹಂ (Ego) ವನ್ನು ಗಮನದಲ್ಲಿಟ್ಟುಕೊಳ್ಳಬೇಕು. ಒಬ್ಬ ಮಹಿಳೆ ವ್ಯವಹಾರಿಕ ಕ್ಷೇತ್ರದಲ್ಲಿ ಹೇಗಿರಬೇಕೆಂದರೆ "Look like a girl, act like a lady and think like a man"

3. ಎಲ್ಲದಕ್ಕೂ ಪ್ರಪಥಮವಾಗಿ ಮುಖ್ಯಸ್ತನ ವಿಶ್ವಾಸವನ್ನು ಗಳಿಸಬೇಕು. ನಮಗೆ ನಮ್ಮಲ್ಲಿ ವಿಶ್ವಾಸವಿಲ್ಲದಿದ್ದರೆ, ನಮಗೆ ಯಾರ ವಿಶ್ವಾಸವನ್ನು ಗಳಿಸಲೂ ಸಾಧ್ಯವಿಲ್ಲ.

4. ಮುಖ್ಯಸ್ತನ ಬಗ್ಗೆ ಭಯವಿರಬಾರದು, ಅವನ ಹವ್ಯಾಸ, ಇಷ್ಟಾನಿಷ್ಟಗಳು ಮನೋಭಾವದ ಬಗ್ಗೆ ಅರಿತಿರಬೇಕು. ಹೇಳುವ ವಿಷಯಗಳನ್ನು ಸಂದರ್ಭಗಳಲ್ಲಿ ಅರಿತು ಹೇಳಬೇಕು.

5. ಸೆಕ್ರೆಟರಿ ಮುಖ್ಯಸ್ತನ 'ಕಣ್ಣು' ಮತ್ತು 'ಕಿವಿ' ಇದ್ದ ಹಾಗೆ. ಅವಳ ಗಮನಕ್ಕೆ ಬಾರದೆ, ಕಛೇರಿಯಲ್ಲಿ ಯಾವುದೆ ಕೆಲಸ ನಡೆಯಬಾರದು. ಅವಳ ಅನುಪಸ್ಥಿತಿಯಲ್ಲಿ ಕಛೇರಿ 'ಅಂಗಹೀನತೆ'ಯ ಭಾವನೆ ಹೊಂದಬೇಕು.

6. ಮುಖ್ಯಸ್ತ ಮತ್ತು ಆಪ್ತ ಸಹಾಯಕಿಯ ನಡುವೆ ಪರಸ್ಪರ ಗೌರವ, ನಂಬಿಕೆ ಇರಬೇಕು. ಸ್ನೇಹವಿದ್ದು, ಹಿತ-ಮಿತವಾಗಿರಬೇಕು. ಆಗ ನಾವು ನಮ್ಮ ವ್ಯವಹಾರಿಕ ಜ್ಞಾನ ವಾದ-ವಿವಾದಗಳನ್ನು ಮುಂದಿಡಬಹುದು.

7. ಅಂಜಿಕೆ, ಸಂಕೋಚಗಳಿಂದಾಗಿ ಸಲಹೆಗಳನ್ನು ನೀಡಲು ಹೊಸ-ಹೊಸ ಜವಾಬ್ದಾರಿಗಳನ್ನು ತೆಗೆದುಕೊಳ್ಳಲು ಹಿಂತೆಗೆಯಬಾರದು. ಹೋಗ್ತಾ- ಹೋಗ್ತ ಎಲ್ಲವೂ ಸರಿಯಾಗುತ್ತದೆ.

8. ಆದಷ್ಟು ಕೆಲಸಗಳಲ್ಲಿ ಭಾಗಿಯಾಗಬೇಕು. ನಮ್ಮ ಕೆಲಸ ಮಾಡುವ ಸಾಮರ್ಥ್ಯದ ಬಗ್ಗೆ ನಮಗೆ ಅಪನಂಬಿಕೆ ಇರಬಾರದು. ಇಂದು ಆಗದ ಕೆಲಸ ಒಂದೂ ಇಲ್ಲ!

9. ನಾವು ಆದಷ್ಟು ನಮ್ಮ ಉಡುಪುಗಳ ಬಗ್ಗೆ ಎಚ್ಚರವಹಿಸಬೇಕು. ನಮ್ಮ ಉತ್ತಮ ಅಭಿರುಚಿ, ನಡುವಳಿಕೆ, ಪ್ರತಿಭೆ ಇದು ಅತ್ಯುನ್ನತ ಸ್ಥಾನದ ಪ್ರತಿಫಲನವಾಗಿರುತ್ತದೆ.

10. ಸೆಕ್ರೆಟರಿಗೆ ಅವಳ/ನ ಧನಾತ್ಮಕ ಹಾಗೂ ಋಣಾತ್ಮಕ ಅಂಶಗಳ ಬಗ್ಗೆ ಸ್ಪಷ್ಟ ಅರಿವು ಇರಬೇಕು, ಧನಾತ್ಮಕ ಅಂಶಗಳನ್ನು ಹೆಚ್ಚಿಸಿಕೊಂಡು ಋಣಾತ್ಮಕ ಅಂಶಗಳನ್ನು ಹೋಗಲಾಡಿಸಿಕೊಳ್ಳಬೇಕು.

11. ಸೆಕ್ರೆಟರಿ ತಾನು ಕಂಡ ಯಾವುದೆ ಕುಂದು ಕೊರತೆಗಳನ್ನು ಮುಚ್ಚಿಡದೆ ತಿಳಿಸಬೇಕು ಆದರೆ ಅದರ ಬಗ್ಗೆ ಖಚಿತವಾಗಿರಬೇಕು.

12. ಸೆಕ್ರೆಟರಿ ಅವಳ/ನ ತಪ್ಪುಗಳನ್ನು ಮುಚ್ಚಿಡಲು ಪ್ರಯತ್ನಿಸಬಾರದು. ಆದಷ್ಟು ತಪ್ಪಾಗದಂತೆ ನಡೆದು ಕೊಂಡು, ಆದ ತಪ್ಪನ್ನು ಸರಿಪಡಿಸಿಕೊಳ್ಳಬೇಕು.

13. ಪ್ರತಿನಿತ್ಯ ಬಂದ ಪತ್ರ - ವ್ಯವಹಾರಗಳಿಗೆ ಸಕಾರಾತ್ಮಕವಾಗಿ ಸರಳವಾಗಿ ಸ್ಪಷ್ಟವಾಗಿ ಉತ್ತರ ನೀಡಬೇಕು.

14. ಅತ್ಯುತ್ತಮವಾಗಿ ಎಲ್ಲಾ ವಿಷಯಗಳನ್ನು ಫೈಲ್ ಮಾಡಿಡಬೇಕು. ಹಾಗೂ ಪ್ರತಿಯೊಂದು ಪದವು ಸ್ಪಷ್ಟವಾಗಿ, ಎಲ್ಲ ವಿವರಗಳನ್ನು ತಿಳಿಸುವಂತೆ ಇರಬೇಕು.

15. ಎಲ್ಲದಕ್ಕೂ ಮೊದಲು ಮುಖ್ಯಸ್ಥ ನಡೆಸುವಂತಹ ವ್ಯವಹಾರ ಎಂತಹದ್ದು ಎಂಬುದರ ಬಗ್ಗೆ ಖಚಿತವಾದ ಅರಿವಿರಬೇಕು.

16. ಬಂದ ದೂರವಾಣಿ ಕರೆಗಳಿಗೆ ಸ್ಪಷ್ಟವಾಗಿ ಚುಟುಕಾಗಿ, ಗೌರವಯುತವಾಗಿ ಉತ್ತರಿಸಬೇಕು. ಆದಷ್ಟು ನಿಮ್ಮ ಕಛೇರಿಯ ಹೆಸರನ್ನು ಮೊದಲು ಹೇಳಿದರೆ ಉತ್ತಮ.

***ಉದಾ:- ದೂರವಾಣಿ ಎತ್ತಿದ ಹಾಗೆ " ಹಲೋ ಕೊಡಗು ಸಂಗಾತಿ"..***

ಹೀಗೆ ಸಮರ್ಥ ಸೆಕ್ರೆಟರಿಗೆ ಉತ್ತಮವಾಗಿ ಮುನ್ನಡೆಯಲು ಈ ರೀತಿಯ ಹಲವಾರು ಅಂಶಗಳು ಬೇಕಾಗುತ್ತದೆ. 'ಸೆಕ್ರೆಟರಿ' ಕೆಲಸ ಒಂದು ಜವಬ್ದಾರಿಯುತ ಕೆಲಸ. ಪೂರ್ಣ ಜವಾಬ್ದಾರಿ ಅವಳ/ನ ಮೇಲಿದ್ದರೂ ಸದಾ ನಗುತ್ತಾ ಕನಿಷ್ಠ ಪಕ್ಷ ತೋರಿಕೆಗೆ ಆದರೂ ನಗು-ನಗುತ್ತಾ ಕೆಲಸ ನಿರ್ವಹಿಸುವ ತಾಳ್ಮೆ ಅವಳ ಅಥವ ಅವನಲ್ಲಿರಬೇಕಾದುದು ದೊಡ್ಡ ಗುಣ.

ಬರಹ: ಮೂಡಗದ್ದೆ ಕೃಪಾ, ತಿತಿಮತಿ.

ಆಶಿಸಿದ ವಸ್ತು ಸಿಗದಿದ್ದರೆ ಹುಟ್ಟುವುದು - ಕ್ರೋಧ

# ಶಿಕ್ಷಣ ರಂಗದಲ್ಲಿ ಕೊಡಗಿನ ಕೀರ್ತಿ ಪತಾಕೆಯನ್ನು ರಾಷ್ಟ್ರೋತ್ತುಂಗಕ್ಕೆ ಕೊಂಡೊಯ್ದ ಪ್ರಥಮ ಕೊಡಗಿನ ಮಹಿಳೆ ಶ್ರೀಮತಿ ತೆಕ್ಕಡೆ ಜಯಶೀಲಾ ಮುತ್ತಣ್ಣ



ಯಾವುದೇ ಸೇವೆಗಿಂತ ಶಿಕ್ಷಣ ಮತ್ತು ಸೈನಿಕ ರಂಗದ ಸೇವೆಗಳು ತ್ಯಾಗಕ್ಕೆ ಪ್ರಸಿದ್ಧವಾದವು. ಈ ಎರಡು ಸೇವೆಗಳಲ್ಲಿ ನಿರತರಾದವರು ತಮ್ಮ ಸ್ವಾರ್ಥವನ್ನು ತ್ಯಜಿಸಿ ಸೇವೆಗಾಗಿ, ನಾಡಿಗಾಗಿ ತಮ್ಮನ್ನು ಸಮರ್ಪಿಸಿಕೊಂಡಾಗ ಮಾತ್ರ ತಮ್ಮ ಹುದ್ದೆಗೂ, ನಾಡಿಗೂ, ತಮ್ಮನ್ನು ನಂಬಿದವರಿಗೂ ನ್ಯಾಯ ದೊರಕಿಸಬಲ್ಲರು. ಪ್ರಾಚೀನದಿಂದಲೂ ಶೌರ್ಯ, ವೀರತನಗಳಿಗೆ ಹೆಸರಾದ ಕೊಡಗು ಜಿಲ್ಲೆ ಸೈನಿಕ ರಂಗಕ್ಕೆ ಹಲವು ಕೊಡುಗೆಯನ್ನು ನೀಡುತ್ತಾ ಬರುತ್ತಿದೆ. ಇದೀಗ ಶಿಕ್ಷಣ ರಂಗಕ್ಕೂ ತನ್ನ ಕೊಡುಗೆ ನೀಡುವುದರೊಂದಿಗೆ ತನ್ನ ಕೀರ್ತಿ ಶಿಖರಕ್ಕೆ ಮತ್ತೊಂದು ಗರಿಯನ್ನು ಮೂಡಿಸಿಕೊಂಡಿದೆ. ಆ ವಿಶಿಷ್ಟ ಸಾಧನೆ ಗೈದು ನಾಡಿನ ಕೀರ್ತಿ ಶಿಖರದ ಮೇಲೆ ಮಿಂಚುತ್ತಿರುವ ಕೊಡಗಿನ ಪ್ರಥಮ ಮಹಿಳೆಯೇ ಶ್ರೀಮತಿ ತೆಕ್ಕಡೆ ಜಯಶೀಲಾ ಮುತ್ತಣ್ಣನವರು.

ಗುರಿ ಸಾಧಿಸುವ ಛಲವೊಂದಿದ್ದರೆ ಏನನ್ನು ಸಾಧಿಸಬಹುದು. ತಾವು ದುಡಿಯುತ್ತಿರುವ ದುಡಿಮೆಯಲ್ಲಿ ಸಮರ್ಪಣ ಭಾವವನ್ನು ಹೊಂದಿದ್ದರೆ ಯಾವುದಾದರೊಂದು ದಿನ ಯಶಸ್ಸು ಕಟ್ಟಿಟ್ಟ ಬುತ್ತಿ ಎಂಬುದನ್ನು ಅರಿತಿದ್ದ ಶ್ರೀಮತಿ ಜಯಶೀಲಾರವರು ಪ್ರಶಸ್ತಿಗಾಗಿ ಹಂಬಲಿಸಿದವರಲ್ಲ. ಆದರೆ ಕುಗ್ರಾಮಗಳನ್ನೇ ಹೊಂದಿರುವ ಕೊಡಗಿನಂತಹ ಜಿಲ್ಲೆಯಲ್ಲಿ ತಮ್ಮ ಅವಿರತ ಶ್ರಮದಿಂದ ವಿದ್ಯಾರ್ಥಿಗಳಲ್ಲಿ ಅರಿವು ಮೂಡಿಸುವಲ್ಲಿ ಯಶಸ್ವಿಯಾದಿವರನ್ನು ಹಲವು ಪ್ರಶಸ್ತಿಗಳು ಅರಸುತ್ತಾ ಬಂದವು. ಈ ಸಾಲಿನಲ್ಲಿ ರಾಷ್ಟ್ರ ಪ್ರಶಸ್ತಿ ಪಡೆಯುದರೊಂದಿಗೆ ಕೊಡಗು ಜಿಲ್ಲೆಯಲ್ಲಿಯೇ ರಾಷ್ಟ್ರ ಪ್ರಶಸ್ತಿ ಪಡೆದ ಮೊದಲ ಮಹಿಳೆ ಎಂಬ ಹೆಗ್ಗಳಿಕೆಗೆ ಇವರು ಪಾತ್ರರಾಗಿದ್ದಾರೆ. ಓದುಗರ ಪರವಾಗಿ 'ಕೊಡಗು ಸಂಗಾತಿ' ಅವರನ್ನು ಮಾತನಾಡಿಸಿದಾಗ ಅವರಾಡಿದ ಬಿಚ್ಚು ನುಡಿಗಳನ್ನು ನಿಮ್ಮ ಮುಂದಿಡುತ್ತಿದ್ದೇವೆ.

***ಕೊಡಗು ಸಂಗಾತಿ: ನಮ್ಮ ಓದುಗರಿಗೆ ನಿಮ್ಮ ಪರಿಚಯ ತಿಳಿಸುವಿರಾ?***

***ಉತ್ತರ :*** ನಾನು ಕೆದಂಬಾಡಿ ಸೋಮಪ್ಪ ಮತ್ತು ಲಲಿತ ದಂಪತಿಗಳ ಮಗಳಾಗಿ 1945 ಜನವರಿ 1 ರಂದು ಜನಿಸಿದೆ. ಮಡಿಕೇರಿಯ ಸೆಂಟ್ರಲ್ ಹೈಸ್ಕೂಲ್‌ನಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನುಪಡೆದು ಶಿವಮೊಗ್ಗದ ಸಹ್ಯಾದ್ರಿ ಕಾಲೇಜಿನಲ್ಲಿ ಪದವಿಯನ್ನು ಪಡೆದು ಮುಂದೆ ಮಂಗಳೂರಿನ ಸಂತ ಅನ್ನಮ್ಮ ವೃತ್ತಿ ಪರ ಕಾಲೇಜಿನಲ್ಲಿ ಬಿ. ಎಡ್., ಪದವಿಯನ್ನುಪಡೆದುಕೊಂಡೆ.

***ಕೊ.ಸಂ : ನಿಮ್ಮ ಕುಟುಂಬ ನಿಮ್ಮ ವಿದ್ಯಾಭ್ಯಾಸದ ಮೇಲೆ ಪರಿಣಾಮ ಬೀರಿತೆ?***

***ಉ:*** ಖಂಡಿತವಾಗಿ, ನಮ್ಮ ಕುಟುಂಬ ಒಂದು ರೀತಿಯಲ್ಲಿ ವಿದ್ಯಾವಂತರಿಂದ ಕೂಡಿದ ಕುಟುಂಬವೆಂದೇ ಹೇಳಬೇಕು. ನಮ್ಮ ತಂದೆಯವರು ಸ್ವಲ್ಪಸಮಯ ಶಿಕ್ಷಕರಾಗಿ ನಂತರ ತಹಶೀಲ್ದಾರರಾಗಿ ಸೇವೆ ಸಲ್ಲಿಸಿದವರು. ನಮ್ಮ ಅಜ್ಜ ಪುಟ್ಟಪ್ಪನವರೂ ಶಿಕ್ಷಕರಾಗಿ ಸೇವೆ ಸಲ್ಲಿಸಿದ್ದರು. ನನ್ನ ಅಕ್ಕ ಕೆ. ಎಸ್. ಇಂದಿರಾರವರು ಶಿಕ್ಷಣ ಇಲಾಖೆಯಲ್ಲಿ ಉನ್ನತ ಹುದ್ದೆಯಲ್ಲಿದ್ದರು. ಅಲ್ಲದೆ ನನ್ನ ಸಹೋದರರು ವೈದ್ಯರೂ, ಇಂಜಿನಿಯರರೂ ಆಗಿದ್ದಾರೆ. ಹೀಗೆ ಎಲ್ಲವರ ಒಡನಾಟದಿಂದ ನಾನುಬಾಲ್ಯದಿಂದಲೂ ವಿದ್ಯಾಭ್ಯಾಸದಲ್ಲಿ ಉತ್ತಮ ಮುನ್ನಡೆಯುನ್ನು ಸಾಧಿಸುತ್ತಾ ಬಂದೆ.

***ಕೊ. ಸಂ. : ನೀವು ಶಿಕ್ಷಣ ರಂಗಕ್ಕೇ ಪಾದಾರ್ಪಣೆ ಗೈಯ್ಯಲು ಪ್ರೇರಣೆಯೇನು?***

***ಉ:*** ನನ್ನ ಗುರುಗಳೇ ಪ್ರೇರಣೆ. ಗುರುಗಳು ಪಾಠ ಮಾಡುತ್ತಿರುವಾಗ ನಾನೂ ಸಹ ಗುರುವಾಗಿ ವಿದ್ಯಾರ್ಥಿಗಳ ದಾರಿದೀಪವಾಗಬೇಕೆಂದು ಬಯಸಿದೆ. ವಿದ್ಯಾರ್ಥಿಗಳ ಪ್ರೀತಿಗೆ ಪಾತ್ರಗಳಾಗಬೇಕೆಂದು ಬಯಸಿದೆ. ನಿರ್ಜೀವ ಕಡತಗಳೊಂದಿಗೆ ಕೆಲಸ ಮಾಡುವುದಕ್ಕಿಂತ ಜೀವಂತ ಮಕ್ಕಳೊಂದಿಗೆ ದುಡಿಯುವ ಹಂಬಲದಿಂದಾಗಿಯೇ, ಎಲ್. ಐ. ಸಿ., ಬ್ಯಾಂಕ್ ಮೊದಲಾದ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುವ ಅವಕಾಶವೊದಗಿದರೂ ಅದನ್ನು ಬದಿಗಿರಿಸಿ ಶಿಕ್ಷಣ ರಂಗಕ್ಕೆ ಪಾದಾರ್ಪಣೆ ಗೈದೆ.

***ಕೊ. ಸಂ.: ನಿಮ್ಮ ಸೇವೆಯಲ್ಲಿ ಹೇಗೆ ಯಶಸ್ಸು ಸಾಧಿಸಿದಿರಿ?***

***ಉ :*** ನಾನು 1970ರಲ್ಲಿ ಮಡಿಕೇರಿಯ ಸಂತ ಜೋಸೆಫರ ಪ್ರೌಢಶಾಲೆಯ ಶಿಕ್ಷಕಿಯಾಗಿ ಸೇವೆ ಆರಂಭಿಸಿದೆ. ಇದೀಗ 33 ವರ್ಷಗಳ ಸೇವೆಯನ್ನು ಸಲ್ಲಿಸಿದ್ದೇನೆ. ಉತ್ತಮ ಶಿಕ್ಷಣ ಸೇವೆ, ವಿದ್ಯಾರ್ಥಿಗಳಲ್ಲಿ ನೈತಿಕತೆಯನ್ನು ಮೂಡಿಸುವುದು. ಶಿಸ್ತನ್ನೂ ಮೂಡಿಸುವುದು, ಇನ್ನೊಬ್ಬರ ಆಜ್ಞೆಗೆ ಕಾಯದೆ ದುಡಿಯುವ, ಹಾಗೂ ಒಳ್ಳೆ ಫಲಿತಾಂಶವನ್ನು ತರಬೇಕೆಂಬ ದೃಢ ಮನಸ್ಸನ್ನು ಇಟ್ಟುಕೊಂಡು ವಿದ್ಯಾರ್ಥಿಗಳಲ್ಲಿ ಸೃಜನಶೀಲತೆಯನ್ನುಬೆಳೆಸಲು ಪ್ರಯತ್ನಿಸುವುದರಿಂದ ಯಶಸ್ಸನ್ನು ಪಡೆಯಲು ಸಾಧ್ಯ. ಅಲ್ಲದೆ ಸಮೂಹ ಓದುಗಾರಿಕೆಗೆ ಉತ್ತೇಜನ ನೀಡುವುದರಿಂದಲೂ ಯಶಸ್ಸನ್ನು ಪಡೆಯಬಹುದು. ಎಲ್ಲಾ ಶಿಕ್ಷಕರ ಪರಿಶ್ರಮದಿಂದ ನಮ್ಮ ಶಾಲೆಯಲ್ಲಿ ಪ್ರತಿವರ್ಷವೂ ಉತ್ತಮಫಲಿತಾಂಶ ದೊರೆಯುತ್ತಿದೆ. ನಾನು ವಿಜ್ಞಾನ ಮತ್ತು ಗಣಿತ ವಿಷಯವನ್ನು ಬೋಧಿಸುತ್ತೇನೆ. ಆ ವಿಷಯಗಳಲ್ಲಿ ಶೇ. 85 ಕ್ಕಿಂತ ಕಡಿಮೆ ಫಲಿತಾಂಶ ಈವರೆಗೆ ಬಂದಿಲ್ಲ. ಕೆಲವೊಮ್ಮೆ ಶೇ. 100 ರಷ್ಟು ಫಲಿತಾಂಶವನ್ನು ಪಡೆದಿರುತ್ತೇವೆ. ಆ ಕಾರಣದಿಂದಲೇ ರಾಷ್ಟ್ರ ಪ್ರಶಸ್ತಿ ನನಗೆ ದೊರಕಿದೆ.

***ಕೊ. ಸಂ.: ನಿಮಗೆ ಇನ್ನಿತರ ಯಾವ ಪ್ರಶಸ್ತಿಗಳು ದೊರಕಿವೆ.***

***ಉ:*** ನನಗೆ 1996 ರಲ್ಲಿ ರಾಜ್ಯ ಪ್ರಶಸ್ತಿ ದೊರಕಿದೆ. ವಿಜ್ಞಾನ ಸಂಘಟಕ ಪ್ರಶಸ್ತಿ ದೊರಕಿದೆ. ಸೃಜನಶೀಲ ಶಿಕ್ಷಕಿ ಪ್ರಶಸ್ತಿ, ಚಿಂತನಶೀಲ ಶಿಕ್ಷಕಿ ಪ್ರಶಸ್ತಿಗಳು ಬಂದಿದೆ. ಆದರೆ ನನಗಿಂತಲೂ ನಾನು ಕಲಿಸಿದ ವಿದ್ಯಾರ್ಥಿಗಳು ರಾಜ್ಯ ಹಾಗೂ ರಾಷ್ಟ್ರ ಮಟ್ಟದಲ್ಲಿ ಪ್ರಶಸ್ತಿಗಳನ್ನೂ ಪಡೆದುಕೊಂಡಿದ್ದಾರೆ. ಅದು ನನಗೆ ಬಹಳಷ್ಟು ಹೆಮ್ಮೆಯನ್ನು ತಂದಿದೆ.

***ಕೊ. ಸಂ.: ರಾಷ್ಟ್ರದ ಉತ್ತಮ ಶಿಕ್ಷಕರಾಗಿ ಇತರ ಶಿಕ್ಷಕರಿಗೆ ನಿಮ್ಮ ಕರೆಯೇನು?***

***ಉ :*** ಬರೀ ಪರೀಕ್ಷೆಗಾಗಿ ವಿದ್ಯಾರ್ಥಿಗಳನ್ನು ಸಿದ್ಧಪಡಿಸುವ ಕಾರ್ಯ ಈಗ ನಡೆಯುತ್ತಿದೆ. ದೇಶ ಕಟ್ಟುವ ಬೃಹತ್ ಹೊಣೆಗಾರಿಕೆ ಶಿಕ್ಷಕರ ಮೇಲಿದೆ ಎಂಬುದನ್ನು ಅರಿತುಕೊಂಡು, ಭಾವೀ ಭಾರತದ ಸತ್ಪ್ರಜೆಗಳನ್ನು ರೂಪಿಸಬೇಕು. ಆದುದರಿಂದಲೆ ವಿದ್ಯಾರ್ಥಿಗಳಲ್ಲಿ ದೈಹಿಕ, ಮಾನಸಿಕ, ಆಧ್ಯಾತ್ಮಿಕ, ನೈತಿಕ, ಜಾಗೃತಿಯನ್ನು ಮೂಡಿಸಿ ಪರಿಪೂರ್ಣತೆಯನ್ನು ಸೃಷ್ಟಿಸಿದಾಗ, ಮಾತ್ರ ಸೇವೆ ಸಾರ್ಥಕವಾಗುತ್ತದೆ. ಕೇವಲ ಹಣಗಳಿಸುವ ಮಾರ್ಗ ತೋರಿಸದೆ ಪರಸ್ಪರ ಮನುಷ್ಯರನ್ನು ಅರಿತುಕೊಳ್ಳುವ ಗುಣವನ್ನು ಅವರಲ್ಲಿ ಮೈಗೂಡಿಸಬೇಕು. ಎಲ್ಲಕ್ಕಿಂತ ಮಿಗಿಲಾಗಿ ಶಿಕ್ಷಕರೂ ನುಡಿದಂತೆ ನಡೆದು ತೋರಿಸಬೇಕು.

**10 ನೇ ಪುಟಕ್ಕೆ**

ಆ ವಸ್ತು ದೊರೆತರೆ ಅದು ತನಗೇ ಇರಲಿ ಎಂಬುವುದು - ಲೋಭ

# ಕೊಡಗು ಎಜುಕೇಶನಲ್ ಅಕಾಡೆಮಿ (ರಿ.), ಬೆಂಗಳೂರು.

## 57ನೇ ಸ್ವಾತಂತ್ರ್ಯ ದಿನಾಚರಣೆ - ಒಂದು ಅದ್ದೂರಿ ಆಚರಣೆ

*ವರದಿ :* [ಅಕಾಡೆಮಿ ಸಲಹೆಗಾರರು ಕಾವೇರಿರ ಡಾ|| ಬೋಜಪ್ಪನವರಿಂದ]

ಕೊಡಗು ಎಜುಕೇಶನಲ್ ಅಕಾಡೆಮಿ (ರಿ.),ಬೆಂಗಳೂರು ಇವರ ಆಶ್ರಯದಲ್ಲಿ 57 ನೇ ಸ್ವಾತಂತ್ರ್ಯ ದಿನಾಚರಣೆಯನ್ನು ಬಹಳ ವಿಜೃಂಭಣೆಯಿಂದ ಆಚರಿಸಲಾಯಿತು. ಮುಖ್ಯ ಅತಿಥಿಯಾಗಿ ಆಗಮಿಸಿದ ಡಾ|| ಆರ್. ವೆಂಕಟರಮನ್ (Rtd. Chief Engineer) ISRO ರವರು ಧ್ವಜಾರೋಹಣ ನೆರವೇರಿಸಿದರು. ಅನಂತರ ಈ ಅಕಾಡೆಮಿಯ ಆಶ್ರಯದಲ್ಲಿ ಜನ್ಮ ತಾಳಿ, 2 ನೇ ವರ್ಷದ ಮೆಟ್ಟಿಲ್ಲನ್ನು ಹೆಮ್ಮೆಯಿಂದ ಹತ್ತಿದ ಕಾವೇರಿ ನ್ಯಾಶನಲ್ ಪಬ್ಲಿಕ್ ಶಾಲೆ ಮಕ್ಕಳಿಂದ ವಿವಿಧ ಚಟುವಟಿಕೆಗಳ ರಮಣೀಯ ಪ್ರದರ್ಶನದ ನಂತರ ನೆರೆದ ಎಲ್ಲರಿಗೂ ಸಿಹಿ ತಿಂಡಿಯನ್ನು ಹಂಚಲಾಯಿತು. ಅಂತೆಯೇ ಎಲ್ಲಾ ಮಕ್ಕಳಿಗೆ ಬಹುಮಾನಗಳನ್ನು ಕೊಡಲಾಯಿತು.

ಈ ಅಕಾಡೆಮಿಯ ಆಶ್ರಯದಲ್ಲಿ 2 ನೇ ಬಾರಿಗೆ ಆಚರಿಸಲಾದ ಈ ಸಮಾರಂಭಕ್ಕೆ 500 ಕ್ಕೂ ಹೆಚ್ಚಿನ ಜನರು ಭಾಗವಹಿಸಿದ್ದದು ನಮ್ಮ ಗೌಡ ಬಾಂಧವರು ಈ ಅಕಾಡೆಮಿಯಲ್ಲಿ ಇಟ್ಟಿರುವ ನಂಬಿಕೆ ವಿಶ್ವಾಸ, ಆಸಕ್ತಿ ಹಾಗೂ ಜವಾಬ್ದಾರಿಕೆಯ ಒಂದು ಸಂಕೇತ. ಜನಾಂಗದವರಿಂದ ಹರಿದು ಬರುತ್ತಿರುವ ಪ್ರೋತ್ಸಾಹ ಇನ್ನೊಂದು ಶುಭ ಸೂಚನೆ.

ಸರಿಯಾದ ವಿದ್ಯೆಯೇ ಒಬ್ಬನ ಜ್ಞಾನದ ಹಾಗೂ ಜೀವನದ ಅಡಿಗಲ್ಲು, ಅಂತಹ ಸುಶಿಕ್ಷಿತ ಪ್ರಜೆಗಳೇ ಒಂದು ನಾಡಿನ ರಾಜ್ಯದ ಹಾಗೂ ರಾಷ್ಟ್ರದ ಏಳಿಗೆಯ ಹಾಗೂ ಸುಭದ್ರತೆಯ ಕೋಟೆ. ಶಿಸ್ತಿನ ಆದಾರದ ಮೇಲೆ ಒಳ್ಳೆಯ ವಿದ್ಯೆಯನ್ನು ನೀಡಬೇಕೆಂಬ ಮುಖ್ಯ ಉದ್ದೇಶದಿಂದಲೇ ಜನ್ಮ ತಾಳಿದ ಈ ಅಕಾಡೆಮಿಯು, ಈ ಗುರಿಯತ್ತ ಮೊದಲಿನ ಹೆಜ್ಜೆ ಎಂಬಂತೆ, ಈ ವರ್ಷದ ಸ್ವಾತಂತ್ರ್ಯ ದಿನಾಚರಣೆಯಲ್ಲಿ SSLC ಹಾಗೂ PUC ಯಲ್ಲಿ ಹೆಚ್ಚಿನ ಅಂಕಗಳನ್ನು ಗಳಿಸಿದ ಹತ್ತು ಕುಟುಂಬ 18 ಗೋತ್ರಕ್ಕೆ ಸೇರಿದ ಗೌಡ ಜನಾಂಗದ ವಿದ್ಯಾರ್ಥಿಯರಿಗೆ ಬಹುಮಾನವನ್ನು ನೀಡಿ ಪ್ರೋತ್ಸಾಹಿಸುವ ಒಂದು ಮುಖ್ಯ ಕಾರ್ಯಕ್ರಮವನ್ನು ಹಮ್ಮಿಕೊಂಡಿತ್ತು. ಅಕಾಡೆಮಿಯ ಈ ಮುಂದಾಲೋಚನೆಯನ್ನು ಮೆಚ್ಚಿ 43ಕ್ಕೂ ಮಿಗಿಲಾದ ಸಂಖ್ಯೆಯಲ್ಲಿ (SSLC + PUC) ಸೇರಿದ್ದ ಎಲ್ಲಾ ವಿದ್ಯಾರ್ಥಿಯರಿಗೂ ಮುಖ್ಯ ಅತಿಥಿಗಳು ಬಹುಮಾನವನ್ನು ನೀಡಿದರು. ಇದರಲ್ಲಿ S.S.L.C.ಯವರ ಪೈಕಿ ಶ್ರೀಮತಿ ಡಾ|| ವಸಂತಕುಮಾರ್ ಇವರ ಮಗಳು ಕು. ಚೈತ್ರಶ್ರೀ ಶೇ. 96.8ರಷ್ಟು ಅಂಕಗಳನ್ನು ಪಡೆದು ಪ್ರಥಮ ಸ್ಥಾನ ಗಳಿಸಿ ರೂ. 2500ರ ಬಹುಮಾನವನ್ನು ಹೊಂದಿದಳು. ಅಂತೆಯೇ PUCಯಲ್ಲಿ ಪುತ್ತೂರಿನ ಸಂಜೀವ ಗೌಡರ ಮಗ ಕಾರ್ತಿಕ್ ಎಂಬುವನು ಶೇ. 91.83 ಅಂಕಗಳನ್ನು ಪಡೆದು ಪ್ರಥಮ ಸ್ಥಾನಗಳಿಸಿ ರೂ. 2500ರ ಬಹುಮಾನ ಗಳಿಸಿದನು . ಎಲ್ಲಾ ಬಹುಮಾನಿತರಿಗೆ ಅಕಾಡೆಮಿಯು ಅಭಿನಂದನೆ ಹಾಗೂ ಶುಭಾಶಯ. ಬಹುಮಾನಗಳನ್ನು ಗಳಿಸಿದ ಎಲ್ಲಾ ವಿದ್ಯಾರ್ಥಿಯರ ಹೆಸರನ್ನು ಈ ಕೆಳಗೆ ಕೊಡಲಾಗಿದೆ.

ಈ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀಮತಿ ಹೊಸೂರು ವಸಂತಿ ವಸಂತಕುಮಾರವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಆಗಮಿಸಿದ ಡಾ|| ಆರ್. ವೆಂಕಟರಾಮನ್‌ರವರು, ಎಂ. ಬಿ. ಜಯರಾಂ ರವರು (ಕರ್ನಾಟಕ ರಾಜ್ಯ ಮುಖ್ಯ ಮಂತ್ರಿಗಳ ಸಾರ್ವಜನಿಕ ಸಂಪರ್ಕ ವಿಶೇಷ ಸಲಹೆಗಾರರು) ಮತ್ತು ಕೇವಳ ಶಿವರಾಮರವರು (ವಕೀಲರು, ಹಾಗೂ ಸಿವಿಲ್ ಜಡ್ಜ್(ಜೂನಿಯರ್ ಡಿವಿಸನ್ ಡೆಸಿಗ್‌ನೆಟ್)ಸಭೆಯನ್ನು ಉದ್ದೇಶಿಸಿ ಮಾತನಾಡಿದರು.ಎಲ್ಲರೂ ಈ ಕಾರ್ಯಕ್ರಮದ ಉದ್ದೇಶವನ್ನು ಮೆಚ್ಚಿ, ದೇಶವು ಈಗ ನಡೆದು ಹೋಗುತ್ತಿರುವ ದಾರಿಯಲ್ಲಿ ವಿದ್ಯಾರ್ಥಿಯರೆಲ್ಲರೂ ಗಮನವಿಟ್ಟು ಅದಕ್ಕೆ ಸರಿಯಾಗಿ ಅಳವಡಿಸಿಗೊಂಡು ಅವರವರ ಏಳ್ಗೆಯನ್ನು ಕಂಡುಕೊಂಡು ರಾಷ್ಟ್ರದ ಏಳಿಗೆಗೆ ಸಹಾಯಕರಾಗಬೇಕೆಂದು ಕರೆ ಇತ್ತರು. ಮೊದಲಿಗೆ ಅಕಾಡೆಮಿಯ ಗೌ|| ಕಾರ್ಯದರ್ಶಿಗಳಾದ ಮೊಟ್ಟನ ರವಿಕುಮಾರವರು (ವಕೀಲರು)ಅಕಾಡೆಮಿಯು ಮುಂದೆಗೂ ಈ ದಿಸೆಯಲ್ಲಿ ವಿದ್ಯಾರ್ಥಿಯರಿಗೆ ಪ್ರೋತ್ಸಾಹವನ್ನು ನೀಡುವುದು. ಅದನ್ನು ಗಳಿಸಲು ಈ ದಿನದಿಂದಲೇ ಪ್ರತೀಯೊಬ್ಬ ವಿದ್ಯಾರ್ಥಿಯೂ ಪ್ರಯತ್ನವನ್ನು ಮಾಡಬೇಕೆಂದು ಹೇಳುತ್ತಾ ಇಂಥ ಒಂದು ದೊಡ್ಡಕಾರ್ಯಕ್ಕೆ ಜನಾಂಗ ಬಾಂಧವರೆಲ್ಲರೂ ಪ್ರೋತ್ಸಾಹ ಹಾಗೂ ಹಣ ಸಹಾಯ ಮಾಡಬೇಕೆಂದು ಎಲ್ಲರನ್ನೂ ಕೇಳಿಕೊಂಡರು.

ಶ್ರೀಮಾನ್ ನಂಗಾರು ನಾಣಯ್ಯನವರು (ಅಕಾಡೆಮಿಯ ಗವರ್ನಿಂಗ್ ಕೌನ್ಸಿಲ್ ಸದಸ್ಯ) ವಂದನಾರ್ಪಣೆಯನ್ನು ಸಲ್ಲಿಸಿದರು. ನೆರೆದ ಎಲ್ಲರಿಗೂ ಮಧ್ಯಾಹ್ನದ ಊಟವನ್ನು ಬೆಂಗಳೂರಿನ ಪ್ರಸಿದ್ಧ ಆರ್ಕಿಟೆಕ್ಟ್ ಶ್ರೀಮಾನ್ ಮುಕ್ಕಾಟಿರ ಮನೋಜ ಕುಮಾರವರು ಏರ್ಪಡಿಸಿದ್ದರು. ಅವರ ಉದಾರತ್ವಕ್ಕೆ ಅಕಾಡೆಮಿಯ ಕೃತಜ್ಞತೆ. ಅಲ್ಲದೆ ಈ ಕಾರ್ಯಕ್ರಮವನ್ನು ನಡೆಸಲು ಧನ ಸಹಾಯ ಮಾಡಿದ ಎಲ್ಲರಿಗೂ ಮತ್ತು ವಿದ್ಯಾರ್ಥಿಯರಿಗೆ ಬಹುಮಾನವನ್ನು ಶ್ರೀಮಾನ್ ಚೆಟ್ಟಿಮಾಡ ಪ್ರಸಾದ್ ಪೂವಯ್ಯ (ರೂ5000) ಶ್ರೀಮಾನ್ ನಂಗಾರು ನಾಣಯ್ಯ (ರೂ. 2000) ಡಾ|| ವಸಂತಕುಮಾರ್ ತಿಮಕಾಪುರ (ರೂ 1000) ಮತ್ತು ಶ್ರೀಮಾನ್ ಪಾಣತ್ತಲೆ ಪದ್ಮನಾಭ್ (ರೂ. 1000) ರವರು ತುಂಬು ಹೃದಯದಿಂದ ನೀಡಿ ಸಹಕರಿಸಿದಕ್ಕೆ ಅಕಾಡೆಮಿಯ ಅನಂತಾನಂತ ಕೃತಜ್ಞತೆಗಳು.

---

ಆ ವಸ್ತುವಿನ ಬಗ್ಗೆ ಮಮತೆ ಹೊಂದಿದರೆ - ಮೋಹ

## ಕೊಡಗು ಎಜುಕೇಷನಲ್ ಅಕಾಡೆಮಿ (K.E.A.) ವತಿಯಿಂದ ಪ್ರತಿಭಾ ಪುರಸ್ಕಾರ.

### *ಹತ್ತನೇ ತರಗತಿ ವಿದ್ಯಾರ್ಥಿಗಳು*

1) ಚಿತ್ರಾ, ಹೊಸೂರು ವಾಸಂತಿ, 96.80%, 2) ಪವನ್ ನಡುಮನೆ ಶಿವರಾಮ್, 94.88%, 3) ಚೇತನಾ, ಮೇರ್ಕಜೆ ಬೋಜಪ್ಪ, 93.12%, 4) ಪವಿತ್ರ, ಪಡ್ಪು ವೆಂಕಟರಮಣ, 93.12%, 5) ಕೃತಿಕ, ಕೆದಂಬಾಡಿ, ಕಿಶೋರಕುಮಾರ್, 92.00%, 6)ಕಾವ್ಯ, ಮೂಡಗದ್ದೆ ಮನೋಹರ್, 89.12%, 7) ತೇಜಸ್ವಿನಿ, ಪೊಕ್ಕುಲಂಡ್ರ ಕುಮಾರ್, 87.68%, 8)ದಿನಿತ, ಲಕ್ಕಪನ ಹರೀಶ್, 87.04%, 9) ಶ್ವೇತಾ, ಕೆ.ಕೆ. ಕೊರಗಪ್ಪ, 87.00%, 10) ತೃಪ್ತಿ, ಕೂಡಕಂಡಿ ಕೆಂಪೆಗೌಡ, 86.72%, 11) ಸಂಧ್ಯ, ತೆಕ್ಕಡೆ ಚೆಂಗಪ್ಪ, 86.56%, 12) ದೀಪ್ತಿ, ಕುಯ್ಯಮುಡಿ ರಘುಪತಿ, 86.40%, 13) ಪ್ರಶಾಂತ್, ನಂಗಾರು ಮಾಚಯ್ಯ, 85.12%, 14) ಗೀತಾ, ಮೂಟೇರ ಉತ್ತಪ, 85.50%, 15)ದೀರಾಕುಮಾರಿ, ಕಲ್ಲಂಟಿ ದೇವಯ್ಯ, 83.04%, 16) ಲಾಲಿತ್ಯ, ನಂಗಾರು ರಾಮಚಂದ್ರ, 82.08%, 17) ಕೃಪಾ, ಕೋರನ ವಿಶ್ವನಾಥ್, 81.17%, 18) ಪ್ರಿಯಾ, ಕೋಡಿ ಜಗದೀಶ್, 81.12%, 19) ನಿತಿಶ್, ನೋಜಿ ಸೂರಪ್ಪ ಗೌಡ, 80.80%, 20) ಯಶಸ್ವಿನಿ, ತಳೂರು ಅಪ್ಪಾಜಿ, 80.80%, 21) ಪವಿತ್ರ, ದಂಬೆಕೋಡಿ ವೋಟಯ್ಯ, 78.88%, 22) ಪುನೀತ್, ಸೋಮಯ್ಯ ಎ. ಡಿ. 77.92%, 23) ಸಚಿನ್, ತಡಿಯಪ್ಪನ ರಾಘುವಯ್ಯ, 77.28%, 24. ವಂದನ, ಟಿ. ಟಿ. ತಿಮ್ಮಯ್ಯ, 75%.

### *ಪಿಯುಸಿ ವಿದ್ಯಾರ್ಥಿಗಳು*

1) ಕಾರ್ತಿಕ್, ಕತ್ಲಡ್ಕ ಸಂಜೀವಗೌಡ, 91.83%, 2) ಸುದೇವ್, ಕೈರಮರ್ ಜಯಪ್ರಸಾದ್, 91.67%, 3) ಅಯ್ಯಪ್ಪ, ದಂಬೆಕೋಡಿ ಸುಬ್ರಮಣಿ, 88.83%, 4) ವೈಭವ್, ಚೆಟ್ಟಿಮಾಡ ಕಾರ್ಯಪ್ಪ, 38.33%, 5) ಕೃತಿಕ, ಮುಂಡೋಡಿ ಜಯರಾಮ್, 87.17%, 6) ಶ್ರೇಯಷ್, ನರೇಂದ್ರ ಯು. ಜೆ. , 87.00%, 7) ಆಶಾ, ಹೊದೆಟ್ಟಿ ವೆಂಕಪ್ಪ, 86.83%, 8) ಅರ್ಪಿತ, ಪಾಣ್ತಲೆ ಪದ್ಮನಾಭ, 85.00%, 9) ಶುಭಲಕ್ಷ್ಮಿ, ಕೆ. ಜಯರಾಂ, 85.00%, 10) ಕಿರಣ್, ಕುಂಜಿಲನ ಪೊನ್ನಪ್ಪ, 83.33%, 11) ಯತೀಶ್, ಬೊಳ್ಳುಮನೆ ಉತ್ತಯ್ಯ, 82.83%, 12) ಚೈತ್ರ, ಕುರುಂಜಿ ರಾಮಣ್ಣ, 82.16%, 13) ಮೋಹನ್, ಪಟ್ಟಡ ತಮ್ಮಯ್ಯ, 80.83%, 14) ಸುಕೃತ, ಚೆಟ್ಟಿಮಾಡ ಉತ್ತಪ್ಪ, 80.83%, 15) ರಮ್ಯ, ಎನ್. ರಾಮಚಂದ್ರ, 80.66%, 16) ಮಧುಮಿತ, ಅಡ್ಕಾರ್ ಸೋಮಯ್ಯ, 79.83%, 17) ರಂಜಿತ್, ಎ. ಚಂದ್ರಜಿತ್, 79.50%,18) ರಾಘುವೇಂದ್ರ, ಪಿ. ಚಿಣ್ಣಪ್ಪ, 78.83%.

- ಸಂಗಾತಿ

## ಮಂಡ್ಯದಲ್ಲಿ ಜರುಗಿದ ಕೆಸರು ಗದ್ದೆ ಓಟ

ರಾಷ್ಟ್ರೀಯ ಕೆಮಿಕಲ್ಸ್ ಮತ್ತು ಫರ್ಟಿಲೈಸರ್ಸ್, ಲಿ. ಮಂಡ್ಯ ನೆಹರು ಯುವಕೇಂದ್ರ ಮಂಡ್ಯ, ಜಿಲ್ಲಾ ಯುವಜನ ಸೇವೆ ಮತ್ತು ಕ್ರೀಡಾ ಇಲಾಖೆ ಮಂಡ್ಯ ಮತ್ತು ಸ್ನೇಹ ಜೀವಿ ಯುವಕ ಸಂಘ ಹಾಗೂ ಜೈ ಕರ್ನಾಟಿಕ ಕನ್ನಡ ಯುವಕರ ಸಂಘ ಮಹದೇವಪುರ, ಶ್ರೀರಂಗಪಟ್ಟಣ ತಾ|| ಇವರುಗಳ ಸಂಯುಕ್ತ ಆಶ್ರಯದಲ್ಲಿ ರಾಷ್ಟ್ರೀಯ ಸದ್ಭಾವನ ಪಾಕ್ಷಿಕದ ಅಂಗವಾಗಿ ಜಿಲ್ಲಾ ಮಟ್ಟದ ಕೆಸರುಗದ್ದೆ ಓಟದ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು.

ಈ ಸ್ಪರ್ಧೆಯ ಮುಕ್ತಾಯ ಹಾಗೂ ಬಹುಮಾನ ವಿತರಣಾ ಸಮಾರಂಬವನ್ನು ದಿನಾಂಕ 23-8-2002 ರಂದು ಶುಕ್ರವಾರ ಮಧ್ಯಾಹ್ನ 3-30 ಕ್ಕೆ ಮಹದೇವಪುರದ ಜವನೇಗೌಡರ ಜಮೀನು ಅಡ್ನಹಳ್ಳಿ, ಮಹದೇವಪುರ ಮೈಸೂರು ರಸ್ತೆಯಲ್ಲಿ ಏರ್ಪಡಿಸಲಾಗಿತ್ತು.

ಅಧ್ಯಕ್ಷತೆಯನ್ನು ವಹಿಸಿಕೊಂಡ ಶ್ರೀ ಎಂ. ಪುಟ್ಟಸ್ವಾಮಿ ಅಧ್ಯಕ್ಷರು, ಸಾಮಾಜಿಕ ನ್ಯಾಯ ಸಮಿತಿ ತಾ. ಪಂ. ಶ್ರೀರಂಗಪಟ್ಟಣ ಇವರು ಉದ್ಘಾಟನೆಯನ್ನು ಮಾಡಿದರು.

ಮುಖ್ಯ ಅತಿಥಿಗಳಾಗಿ ಶ್ರೀ ಮೂಗಯ್ಯ ಸದಸ್ಯರು, ಜಿ. ಪಂ. ಮಂಡ್ಯ ಶ್ರೀಮತಿ ರಾಜಮ್ಮ ಅಧ್ಯಕ್ಷರು, ಗ್ರಾಂ. ಪಂ. ಮಹದೇವಪುರ, ಶ್ರೀ ಎ. ಎನ್. ಶಾಸ್ತ್ರಿ ಮಾರಾಟ ವ್ಯವಸ್ಥಾಪಕರು ಆರ್. ಸಿ. ಎಫ್ ಮಂಡ್ಯ ಇವರು ಹಾಜರಿದ್ದರು.

ಯುವಕರಲ್ಲಿ ಕ್ರೀಡಾ ಮನೋಭಾವನೆ ಬೆಳೆಸುವುದು, ಅವರಿಗೆ ಗ್ರಾಮೀಣ ಕ್ರೀಡೆಗಳಲ್ಲಿ ಆಸಕ್ತಿ ಬೆಳೆಸುವುದು, ಸರಕಾರದ ಇಲಾಖೆಯ ಸಹಾಯವಿಲ್ಲದೆಯೇ ಇಂತಹ ಕ್ರೀಡೆಗಳನ್ನು ನಡೆಸುವುದು, ಮುಂತಾದ ಸದುದ್ದೇಶಗಳನ್ನಿಟ್ಟುಕೊಂಡು ಈ ಸ್ಪರ್ಧೆಯನ್ನು ನಡೆಸಲಾಯಿತು. ಇಲ್ಲಿ ಸೋಲು-ಗೆಲುವು ಮುಖ್ಯವಲ್ಲ, ಇಂತಹ ಕ್ರೀಡೆಗಳಲ್ಲಿ ಭಾಗವಹಿಸುವುದೇ ಮುಖ್ಯ.

ಈ ಸಮಾರಂಭದಲ್ಲಿ ಕೃಷಿಗೆ ಅಗತ್ಯವಾದ ಗೊಬ್ಬರಗಳ ಬಗ್ಗೆ ಮಾಹಿತಿ ನೀಡಿ ಕೆಸರು ಗದ್ದೆ ಓಟದ ಸ್ಪರ್ಧೆಯಲ್ಲಿ ಪ್ರಥಮ ದ್ವಿತೀಯ, ತೃತೀಯ ಸ್ಥಾನ ಗಳಿಸಿದವರಿಗೆ ಬಹುಮಾನವಾಗಿ ಗೊಬ್ಬರ ಮೂಟೆಗಳನ್ನು ನೀಡಲಾಯಿತು. ಈ ಸಮಾರಂಭದಲ್ಲಿ ಕೊಡಗು ಸಂಗಾತಿಯ ಗೌರವ ಸಂಪಾದಕರಾದ ಪಟ್ಟಡ ಪ್ರಭಾಕರರವರು ಮಾತನಾಡುತ್ತಾ ಕೊಡಗಿನಲ್ಲಿ ಪುರಾತನ ಕಾಲದಿಂದಲೇ, ಈ ರೀತಿಯ ಕೆಸರುಗದ್ದೆ ಕ್ರೀಡೆಯು ನಡೆಯುತ್ತಾ ಬಂದಿದ್ದು, ಅಲ್ಲಿ ಕೇವಲ ಓಟ ಮಾತ್ರವಲ್ಲದೆ, ವಾಲಿಬಾಲ್ ಥ್ರೋಬಾಲ್, ಕಬ್ಬಡಿ, ಹಗ್ಗ ಜಗ್ಗಾಟ ಇನ್ನಿತರ ಆಟಗಳನ್ನು ನಡೆಸುತ್ತಾರೆ. ಈ ಸ್ಪರ್ಧೆಗಳಲ್ಲಿ ಮಹಿಳೆಯರಿಗೂ ಅವಕಾಶಗಳಿರುತ್ತವೆಯೆಂದೂ, ಈ ಕ್ರೀಡೆಯ ಬಗ್ಗೆ ಹಲವಾರು ಮಾಹಿತಿಯನ್ನು ನೀಡಿದರು.

-ಸಂಗಾತಿ.

# ನಾವು ವೈಷ್ಣವರಲ್ಲ ?

'ಕೊಡಗು ಸಂಗಾತಿ' ಪತ್ರಿಕೆಯ ಸಂಚಿಕೆ 9-10ರಲ್ಲಿ ಪ್ರಕಟವಾದ ಶ್ರೀ ಎನ್. ಎಸ್. ದೇವಿಪ್ರಸಾದರ 'ನಾವು ವೈಷ್ಣವರಲ್ಲ' ಎಂಬ ಲೇಖನ ಸಾಮೂಹಿಕ ಚಿಂತನೆ ಮತ್ತು ಚರ್ಚೆಗೆ ಆಹ್ವಾನ ನೀಡುವಂತಿದೆ. ಈ ಬಗ್ಗೆ ನನ್ನ ಅನಿಸಿಕೆಗಳನ್ನು ಕುಲ ಬಾಂಧವರ ಮುಂದಿಡ ಬಯಸುತ್ತೇನೆ.

ನಮ್ಮ ಪಂಗಡದವರ ಮದುವೆಗಳಲ್ಲಿ ಶೃಂಗೇರಿ ಮಠಕ್ಕೆ ಗುರುಕಾಣಿಕೆ ಸಲ್ಲಿಸುವ ಸಂಪ್ರದಾಯವಿದೆ. ಮದುವೆಯ ಕರ್ತೃ ಶೃಂಗೇರಿ ಶಾರದಾಂಬೆಗೆ (ಸರ್ವಾಂಬೆ, ಸುಬ್ಬಮ್ಮ) ಹರಿಕೆ ಹಣ ಕಟ್ಟಿ ಅದನ್ನು ಗ್ರಾಮ ಗೌಡ, ಮೂಗಣೆಗೌಡ ಮತ್ತು ಕಟ್ಟೆ ಮನೆ ಗೌಡನ ಮೂಲಕ ಶೃಂಗೇರಿ ಮಠಕ್ಕೆ ಸಲ್ಲಿಸುವ ವ್ಯವಸ್ಥೆ ಇತ್ತು. ಕಟ್ಟೆ ಮನೆ ಕುಲ ಪಂಚಾಯಿತಿ ಸೇರುವ ಸ್ಥಳವೂ ಆಗಿತ್ತು. ಈ ವ್ಯವಸ್ಥೆ ನಮ್ಮ ಪಂಗಡಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಇತರ ಪಂಗಡಗಳಲ್ಲೂ ಇದು ಅಸ್ತಿತ್ವದಲ್ಲಿತ್ತು. ಹೆಸರಾಂತ ಸಾಹಿತಿ ಬಸವರಾಜ ಕಟ್ಟೀಮನಿ ಲಿಂಗಾಯುತರಲ್ಲಿ, ಕಟ್ಟೆ ಮನೆಗೆ ಸೇರಿದವರಾಗಿದ್ದರು. ಶೃಂಗೇರಿ ಪೀಠದ ಬದಲು ಅವರು ತಮ್ಮದೇ ಆದ ಗುರು ಮಠಗಳಿಗೆ ಗುರು ಕಾಣಿಕೆಗಳನ್ನು ಸಂದಾಯ ಮಾಡುತ್ತಿದ್ದರು.

ಕಟ್ಟೆ ಮನೆಯವರಿಗೆ ಹಿಂದೆ ಇದ್ದ ಸಮಾಜದ ಕಟ್ಟುಕಟ್ಟಳೆಗಳನ್ನು ಮೀರಿ ನಡೆಯುವವರನ್ನು ಶಿಕ್ಷಿಸುವ ಅಧಿಕಾರ ಸ್ವಾತಂತ್ರ್ಯಾ ನಂತರ ಶಿಥಿಲಗೊಂಡಿತು. ರಾಜಕಾರಣಿಗಳಿಗೆ ಮಣೆ ಹಾಕುವ ಹೊಸ ಸಂಪ್ರದಾಯಕ್ಕೆ ನಾಂದಿಯಾಯಿತು. ಗ್ರಾಮಗೌಡ, ಮಾಗಣೆ ಗೌಡ ಮತ್ತು ಕಟ್ಟೆ ಮನೆ ಗೌಡರು ಶ್ರೀ ಮಠದಿಂದ ಅಧಿಕಾರದ ದೀಕ್ಷೆ ಪಡೆಯದಿದ್ದುದು ಅದರ ಅಧಿಕಾರ ಶೈಥಿಲ್ಯಕ್ಕೆ ಮುಖ್ಯ ಕಾರಣವಾಯಿತು. ಈಗ ಮದುವೆ ಕಾಲದಲ್ಲಿ ಶಾರದಾಂಬೆಯ ಹೆಸರಿನಲ್ಲಿ ಹರಿಕೆ ಹಣ ಕಟ್ಟಿ ಅದನ್ನು ವೆಂಕಟರಮಣನ ಮುಡುಪಿಗೆ ಹಾಕಿ ತಿರುಪತಿ ಯಾತ್ರೆಯ ಸಂದರ್ಭದಲ್ಲಿ ತಿರುಪತಿಯ ಭಂಡಾರಕ್ಕೆ ತಲಪಿಸುತ್ತಾರೆ.

'ಈ ವ್ಯವಸ್ಥೆ ವಿಜಯನಗರದ ಅರಸರ ಕಾಲದಲ್ಲಿ ಜಾರಿಗೆ ಬಂದಿತು. ವಿಜಯನಗರ ಅರಸರ ಕಾಲದವರೆಗೆ ನಮ್ಮ ಪಂಗಡದವರ ಗುರು ಪರಂಪರೆ ಮತ್ತು ಪಂಗಡ ವ್ಯವಸ್ಥೆ ಅಸ್ಪಷ್ಟವಾಗಿದೆ. ವಿಜಯನಗರದ ಮೊದಲ ಅರಸರು ಶೈವರಾಗಿದ್ದುದರಿಂದ ತಮ್ಮ ರಾಜಶಾಸನಗಳನ್ನು ಪಂಪಾವಿರೂಪಾಕ್ಷದ ಹೆಸರಲ್ಲಿ ಹೊರಡಿಸಿದರು. ಶೃಂಗೇರಿಯ ಮಠಾಧೀಶ್ವರರು ವಿಜಯನಗರದ ಸಾಮ್ರಾಜ್ಯವನ್ನು ಬೆಂಬಲಿಸಿದರು. ಇದರಿಂದ ಅವರಿಗೆ ಅಗತ್ಯವಾದ ರಾಜಾಶ್ರಯ ದೊರೆಯಿತು. ವಿಜಯನಗರದ ಮೊದಲ ಅರಸರು ಕಾಳಾಮುಖ ಪಂಥದ ಗುರುಗಳಿಂದಲೂ ಮಾರ್ಗದರ್ಶನ ಪಡೆದರು. ವೀರ ಶೈವರೂ ಶಿವನ ಆರಾಧಕರಾಗಿದ್ದುದರಿಂದ ಅವರನ್ನೂ ಪ್ರೋತ್ಸಾಹಿಸಿದರು.

ಶೈವ ಧರ್ಮ ಅನಾದಿ ಕಾಲದಿಂದಲೂ ಭಾರತದಲ್ಲಿ ಪ್ರಚಾರದಲ್ಲಿದ್ದರೂ ಬಸವಣ್ಣನವರಿಗಿಂತ ಹಿಂದೆ ಪಂಚಾಚಾರ್ಯರು, ತದನಂತರ ಬಸವಣ್ಣನವರೂ ಶೈವ ಧರ್ಮದ ಭಿನ್ನರೂಪವಾದ ವೀರ ಶೈವ ಧರ್ಮವನ್ನು ಪ್ರಚಾರಕ್ಕೆ ತಂದು ಅದನ್ನು ಜನಪ್ರಿಯಗೊಳಿಸಿದರು.

ಜೈನ ಮತ್ತು ಬೌದ್ಧ ಧರ್ಮಗಳು ಉದಯವಾಗುವಷ್ಟರಲ್ಲಿ ವೈಷ್ಣವಧರ್ಮ, (ಭಾಗವತ ಪಂಥ) ಅಸ್ತಿತ್ವಕ್ಕೆ ಬಂದಿತು. ಮತ್ಸ್ಯ ಪುರಾಣದಲ್ಲಿ ವಿಷ್ಣುವಿನ ದಶಾವತಾರಗಳ ಉಲ್ಲೇಖವಿದೆ. ರಾಮಾನುಜಾಚಾರ್ಯರಿಗಿಂತ ಹಿಂದೆಯೇ ವೈಷ್ಣವ ಧರ್ಮ ದಕ್ಷಿಣ ಭಾರತದಲ್ಲಿ ಪಸರಿಸಿತ್ತು.

ವಿಜಯನಗರದ ಹಿಂದಿನ ಅಸರು ಶೈವರಾಗಿದ್ದರೂ ನಂತರದ ಅರಸರು ವೈಷ್ಣವರಾಗಿದ್ದುದರಿಂದ ತಿರುಪತಿ ವೆಂಕಟೇಶನ ಹೆಸರಿನಲ್ಲಿ ರಾಜಾಜ್ಞೆಗಳನ್ನು ಹೊರಡಿಸಿದರು. ವಿಜಯನಗರದ ಖ್ಯಾತ ಅರಸ ಕೃಷ್ಣದೇವರಾಯ ತಿರುಪತಿ ವೆಂಕಟೇಶನ ಪರಮ ಭಕ್ತರಾಗಿದ್ದರು. ತಿರುಪತಿ ದೇವಾಲಯದ ಒಳ ಆವರಣದಲ್ಲಿ ಕೃಷ್ಣ ದೇವರಾಯ ಮತ್ತವನ ಇಬ್ಬರು ರಾಣಿಯರ ಕಂಚಿನ ಪುತ್ಥಳಿಗಳನ್ನು ಇಂದಿಗೂ ನಾವು ಕಾಣಬಹುದಾಗಿದೆ. ಯಥಾ ರಾಜಾ ತಥಾ ಪ್ರಜಾ' ಎಂಬ ನಾಣ್ಣುಡಿಯಂತೆ ರಾಜನ ಉನ್ನತಾಧಿಕಾರಿಗಳಲ್ಲಿ ಕೆಲವರು ಮತ್ತು ಪ್ರಜೆಗಳಲ್ಲಿ ಹೆಚ್ಚಿನವರು ಅರಸನ ಧರ್ಮವನ್ನೇ ಅನುಸರಿಸತೊಡಗಿದರು.

'ತಿರುಪತಿ' ಒಂದು ವಿಷ್ಣು ಕ್ಷೇತ್ರ ಎಂಬುದರ ಬಗ್ಗೆ ಎರಡು ಮಾತಿಲ್ಲ. ಇದು 'ತಿರು' ಎಂಬ ದ್ರಾವಿಡ ಪದ ಮತ್ತು 'ಪತಿ' ಎಂಬ ಸಂಸ್ಕೃತ ಪದ ಸೇರಿ ಆಗಿದೆ. ಸಂಸ್ಕೃತದಲ್ಲಿ 'ಶ್ರೀಪತಿ' ಎಂದಾಗುತ್ತದೆ. ಶ್ರೀಶ, ಶ್ರೀನಾಥ, ಶ್ರೀಕಾಂತ, ಶ್ರೀನಿವಾಸ, ಇತ್ಯಾದಿ ಪರ್ಯಾಯ ಪದಗಳು ಅದೇ ಅರ್ಥವನ್ನು ಕೊಡುತ್ತವೆ. ತಿರುಪತಿ ದೇವಸ್ಥಾನದ ಮಹಾದ್ವಾರದ ಪಾರ್ಶ್ವದಲ್ಲಿರುವ ವರಾಹ ಮೂರ್ತಿಗೆ ಪೂಜೆ ಸಲ್ಲಿಸಿದ ನಂತರವೇ ವೆಂಕಟೇಶನಿಗೆ ಪೂಜೆ ಸಲ್ಲುತ್ತದೆ. ವರಾಹ ಮೂರ್ತಿ ಅಲ್ಲಿಯ ಆದಿ ಮೂರ್ತಿಯೆಂದು ಪ್ರತೀತಿ. ವರಾಹ ಮೂರ್ತಿ ವಿಷ್ಣುವಿನ ದಶಾವತಾರಗಳಲ್ಲಿ ಮೂರನೆಯದು. ವೆಂಕಟೇಶನಿಗೆ ಅಲ್ಲಿ ನೆಲೆಸಲು ನೆಲೆ ಕೊಟ್ಟವನು. ಹೀಗೆ ತಿರುಪತಿ ವಿಷ್ಣುವಿನ ಆ ವಾಸ ಸ್ಥಾನವಾಗಿ, ಯಾತ್ರಾ ಸ್ಥಳವಾಗಿ ಭಕ್ತರನ್ನು ಆಕರ್ಷಿಸುತ್ತದೆ.

ತಿರುಪತಿ ವೆಂಕಟೇಶ, ಏಳು ಬೆಟ್ಟ ದೊಡೆಯ ಮತ್ತು ಏಳು ಮಲೆ ಎಪ್ಪತ್ತುಗಿರಿವಾಸಿ ಎಂದು ಕರೆಸಿಕೊಳ್ಳುತ್ತಾನೆ. ಆ ಏಳು ಬೆಟ್ಟಗಳು 1) ಶೇಷಾಚಲ 2)ವೇದಾಚಲ 3) ಗರುಡಾಚಲ 4) ವೃಷಬಾದ್ರಿ, 5) ಅಂಜನಾದ್ರಿ 6) ಆನಂದಗಿರಿ ಮತ್ತು 7) ವೆಂಕಟಾಚಲ (ತಿರುಮಲ). ವೆಂಕಟಾಚಲದಲ್ಲಿ ನೆಲೆ ನಿಂತಿರುವ ಅವನು ವೆಂಕಟರಮಣ, ವೆಂಕಟೇಶ, ವೆಂಕಟೇಶ್ವರ, ತಿರುಮಲೇಶ, ಇತ್ಯಾದಿ ಹಲವು ಹೆಸರುಗಳಿಂದ ಕರೆಸಿಕೊಳ್ಳುತ್ತಾನೆ. 'ಈಶ' ಮತ್ತು 'ಈಶ್ವರ' ಪದಗಳಿಗೆ 'ಶಿವ' ಎಂಬ ಅರ್ಥವಿರುವಂತೆ 'ಒಡೆಯ' (ಸ್ವಾಮಿ) ಎಂಬ ಅಷ್ಟೇ ಪ್ರಧಾನ ಅರ್ಥವೂ ಇದೆ. ಉದಾಹರಣೆಗೆ - ಸುರೇಶ, ರಮೇಶ, ಹರೀಶ, ಗಿರೀಶ, ಜಗದೀಶ, ಪ್ರಾಣೇಶ, ಅವನೀಶ, ಮಠಾಧೀಶ,

ಮಠಾಧೀಶ್ವರ, ಇತ್ಯಾದಿ. ಈ ಸಂದರ್ಭದಲ್ಲಿ ಎರಡನೆಯ ಅರ್ಥವೇ ಸಮಂಜಸ. ತಿರುಪತಿ ಕ್ಷೇತ್ರದಲ್ಲಿ ಶ್ರೀ ವೆಂಕಟೇಶನ ಆಳೆತ್ತರದ ಭವ್ಯ ಶಿಲಾಮೂರ್ತಿ ಕಂಗೊಳಿಸುತ್ತಿರುವುದನ್ನು ನಾವು ನೋಡಬಹುದಾಗಿದೆ. ನಾವು ವೈಷ್ಣವ ಧರ್ಮವನ್ನು ಸ್ವೀಕರಿಸಿದ್ದರ ದ್ಯೋತಕವಾಗಿ ತಿರುಪತಿ ವೆಂಕಟರಮಣನಿಗೆ ಮುಡಿಪು ಕಟ್ಟಿ ಕಾಲ ಕಾಲಕ್ಕೆ ತಿರುಪತಿ ಯಾತ್ರೆ ಕೈಗೊಂಡು ಹರಿ ಸೇವೆ ನಡೆಸುತ್ತೇವೆ. ಹಿಂದಿನ ಆರಾಧನೆಯನ್ನು ಮರೆಯದೆ ಹರಿಸೇವೆಯೊಂದಿಗೆ ಕೆಂಚರಾಯ ಸೇವೆಯನ್ನೂ ನಡೆಸುತ್ತೇವೆ.

**ಯಾರೀ ಕೆಂಚರಾಯ?** ಭಸ್ಮಾಸುರನನ್ನು ಸಂಹರಿಸುವ ಸಲುವಾಗಿ ವಿಷ್ಣು ಮೋಹಿನಿ ರೂಪವನ್ನು ಧರಿಸಿದನು. ರಾಕ್ಷಸನನ್ನು ಸಂಹರಿಸಿದ ನಂತರ ವಿಷ್ಣು ಅದೇ ರೂಪದಲ್ಲಿ ಕೈಲಾಸಕ್ಕೆ ಹೋಗಲು ಮೋಹಿನಿಯ ರೂಪಿಗೆ ಮರುಳಾದ ಶಿವ ಆಕೆಯನ್ನು ಕೂಡಿದ. ಹೀಗೆ ವಿಷ್ಣು ಮತ್ತು ಶಿವ ಶಕ್ತಿಯರ ಸಂಗಮವೇ ಕಾಲ ಭೈರವ, ಅಥವಾ ಕೆಂಚರಾಯ. ಅವನು ವೀರಭದ್ರನ ಆಜ್ಞೆಯಂತೆ ಶಿವನದ್ವಾರ ಪಾಲಕನಾದ. ಇವನೇ ಶ್ರೀ ಆದಿ ಚುಂಚನಗಿರಿಯಲ್ಲಿ ಆರಾಧಿಸಲ್ಪಡುವ ಪ್ರಧಾನ ದೇವತೆ.

ಶೃಂಗೇರಿ ಮಠಕ್ಕೆ ಸಂಬಂಧಿಸಿದ ವ್ಯವಸ್ಥೆಗಿಂತ ಸ್ವಲ್ಪ ಭಿನ್ನವಾದ ವ್ಯವಸ್ಥೆಯನ್ನು ಆದಿ ಚುಂಚನಗಿರಿ ಮಠದಲ್ಲಿ ಕಾಣುತ್ತೇವೆ. ಜೋಗಪ್ಪ, ಚೂರದಾರ ಮತ್ತು ಸುಬೇದಾರ ಶ್ರೀ ಮಠಕ್ಕೆ ಚರಕಾಣಿಕೆ ಮತ್ತು ಗುರು ಕಾಣಿಕೆಗಳನ್ನು ವಸೂಲು ಮಾಡುವ ಅಧಿಕಾರಿಗಳಾಗಿದ್ದಾರೆ. ಕಾಲ ಭೈರವನ ಒಕ್ಕಲಿರುವ ಎಲ್ಲಾ ಗ್ರಾಮಗಳಲ್ಲಿಯೂ ಒಬ್ಬ ಜೋಗಪ್ಪ ಇರುತ್ತಾನೆ. ಅವನು ಆ ಗ್ರಾಮದ ಪೂಜಾರಿ. ಶುಭ ಕಾರ್ಯಗಳಲ್ಲಿ ಪೂಜೆ ಮಾಡುವುದು, ಹುಟ್ಟು -ಸಾವುಗಳಲ್ಲಿ ಭಕ್ತನ ಸೂತಕ ನಿವಾರಿಸುವುದು ಅವನ ಕರ್ತವ್ಯವಾಗಿರುತ್ತದೆ. ಜೋಗಪ್ಪ ಶ್ರೀ ಮಠದ ಗುರುಗಳ ಅನುಗ್ರಹದೊಂದಿಗೆ ದೀಕ್ಷಾ ಬದ್ಧನಾಗುತ್ತಾನೆ. ಹೀಗೆ ದೀಕ್ಷಾ ಬದ್ಧರಾದವರು ವರ್ಷಕ್ಕೊಮ್ಮೆ ಕಾಲ ಭೈರವನಿಗೆ ಮುಡಿಪನ್ನು ನೀಡಲೇ ಬೇಕೆಂಬ ಸಂಪ್ರದಾಯವಿದೆ.

ಸಬ್ಬಮ್ಮ ದೇವಿಯ ಆರಾಧಕರಾದ ನಾವು ಶಾಕ್ತರು. ಸಬ್ಬಮ್ಮ ದೇವಿಯ ಆರಾಧನೆಯಲ್ಲದೆ ಕುಂಭ ಗೌಡನ ಕುಟುಂಬ ಮತ್ತು ಬಾಡನ ಕುಟುಂಬಗಳಲ್ಲಿ ಕೆಂಚಮ್ಮ ದೇವಿಯ ಆರಾಧನೆ, ಕರ್ಣಯ್ಯನ ಕುಟುಂಬದಲ್ಲಿ ಲಕ್ಷ್ಮೀ ದೇವಿಯ ಆರಾಧನೆ ನಡೆಯುತ್ತಿದೆ. ಕಾಲ ಭೈರವನ ಆರಾಧಕರಾದ ನಾವು ಶೈವರೂ ಹೌದು. ವೆಂಕಟೇಶನ ಆರಾಧಕರಾದ ನಾವು ವೈಷ್ಣವರಾಗಿರುವುದು ಅಷ್ಟೇ ಸತ್ಯ. ದೇವನೊಬ್ಬ ನಾಮ ಹಲವು.

*ಆಧಾರ ಗ್ರಂಥಗಳು :*

1) ಸಂಗಮರ ಕಾಲದ ವಿಜಯನಗರ : ಅದರ ಇತಿಹಾಸ ಮತ್ತು ಸಂಸ್ಕೃತಿಗಳ ಅಧ್ಯಯನ,- ಸಂಪಾದಕರು, ಜಿ. ಎಸ್. ದೀಕ್ಷಿತ್.

2) ಶ್ರೀ ಆದಿ ಚುಂಚನಗಿರಿ ಕ್ಷೇತ್ರ ಮಹಿಮೆ.

ಬರಹ: ಕುಲ್ಲಚನ ಕಾರ್ಯಪ್ಪ, ಕುಂಬಳದಾಳು ಗ್ರಾಮ.

# ಗೌಡ ಮಹಿಳಾ ಸಮಾಜ, ಬೆಂಗಳೂರು.

ಬೆಂಗಳೂರಿನಲ್ಲಿ ನೆಲೆಸಿರುವ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಬಂಧು ಬಾಂಧವರೆಲ್ಲರೂ ಹತ್ತು ಕುಟುಂಬ ಹದಿನೆಂಟು ಗೋತ್ರಕ್ಕೆ ಸೇರಿದವರೆಂದು ಅನ್ನಿಸಿಕೊಳ್ಳುವುದರಲ್ಲಿ ಮುಂದಾಗಿದ್ದಾರೆ. ಅಂದರೆ ಒಮ್ಮತಕ್ಕೆ ಜಯ ಖಂಡಿತ ಎಂಬ ತತ್ವವನ್ನು ಸಾಧಿಸಲು ಮುಂದಾಗಿ ಇವರ ಪ್ರಯತ್ನಕ್ಕೆ ಜಯವಾಗಲಿ ಎಂದು ಹಾರೈಸೋಣ.

ಈ ಸಮಾಜದವರು ತಮ್ಮ ಚಟುವಟಿಕೆಗಳ ಅಂಗವಾಗಿ ಕಳೆದ ಜುಲೈ ತಿಂಗಳ 28 ರಂದು "ಮಧುವನ" ಎಂಬ ಒಂದು ಪ್ರೇಕ್ಷಣೀಯ ಸ್ಥಳಕ್ಕೆ ಭೇಟಿ ಕೊಟ್ಟರು. ಈ ಮಧುವನ ಎಂಬ ಸ್ಥಳವು ಸ್ಥಳೀಯರಾದ ಶ್ರೀ ದಯಾನಂದ ಪೈಯವರಿಗೆ ಸೇರಿದ್ದಾಗಿದೆ. ಶ್ರೀಯುತರು ತನ್ನ ಸ್ವಂತ ಪರಿಶ್ರಮದಿಂದ ಒಂದು ಪುಟ್ಟ ಮಲೆನಾಡಿನ ದೃಷ್ಯವನ್ನೇ ಇಲ್ಲಿ ಸೃಷ್ಟಿಸಿದ್ದಾರೆ. ತಮಗೆ ಸೇರಿದ 15 ಏಕರೆಯಲ್ಲಿ ಕಾಫಿ, ಏಲಕ್ಕಿ, ತೆಂಗು, ಅಡಿಕೆ, ಕರಿಮೆಣಸು, ಕೊಕ್ಕೊ ಹಾಗೂ ಇನ್ನಿತರ ಸಂಬಾರದ ಬೆಳೆಗಳ ಜೊತೆಗೆ ಅನೇಕ ಹಣ್ಣು ಹಂಪಲುಗಳು ನಾನಾ ವಿಧದ ತರಕಾರಿ ಮತ್ತು ಹೂ ಗಿಡಗಳನ್ನು ಬೆಳೆಸಿ ಒಂದು ಮಾದರಿ ತೋಟಗಾರ ಎನ್ನಿಸಿಕೊಂಡಿದ್ದಾರೆ. ಆ ಸ್ಥಳದ ಮಧ್ಯದಲ್ಲಿ ಒಂದು ತೇಲುವ ಅತಿಥಿ ಗೃಹವನ್ನು ನಿರ್ಮಿಸಿದ್ದಾರೆ. ಅಂತೆಯೇ ಪ್ರೇಕ್ಷಕರ ಉಪಯೋಗಕ್ಕಾಗಿ ಒಂದು ದೊಡ್ಡ ಗಾಯನ ಮಂಟಪವನ್ನು ಸಹ ನಿರ್ಮಿಸಲಾಗಿದೆ. ಅಲ್ಲಿಯ ರಮಣೀಯ ದೃಶ್ಯಗಳಲ್ಲಿ ಹಚ್ಚ ಹಸಿರಿನ ಲಾನ್ ನೀರಿನ ಕಾರಂಜಿ ರಾಕ್ ಗಾರ್ಡನ್, ರೋಸ್ ಗಾರ್ಡನ್ ಆರ್ಚಸ್ ಮತ್ತು ಪೆರುಗೋಳಾಸ್, ಬ್ರಿಡ್ಜಸ್ ಮತ್ತು ಕ್ರಾಸ್‌ವೇಸ್, ಮುಂತಾದವುಗಳು ಕಣ್ಣಿಗೆ ಕಂಪನ್ನು ನೀಡುವಂತವುಗಳು.

ಇನ್ನು ಶ್ರೀ ಪೈಯವರ ಮನೆ ಅನ್ನುವುದಕ್ಕಿಂತ ಅರಮನೆ ಎಂದರೆ ತಪ್ಪಾಗದು. ಇಲ್ಲಿ ಅವರ ಶ್ರೀಮಂತಿಕೆಯ ಶ್ರದ್ಧೆ ಹಾಗೂ ಶ್ರಮವನ್ನು ಮೆಚ್ಚ ಬೇಕಾದದ್ದು. ತಮ್ಮ ಭವನವನ್ನು ವಿವಿಧ ರೀತಿಯ ಅಲಂಕಾರದ ಸಾಮಾನುಗಳಿಂದ ಅಂದರೆ ಅವರ ಪರದೇಶದ ಪ್ರವಾಸಗಳಿಂದ ಆಯ್ದು ತಂದ ಅಪರೂಪದ ಸುಂದರವಾದ ವಸ್ತುಗಳನ್ನು ಪ್ರದರ್ಶಿಸಿದ ರೀತಿ, ಶ್ರೀ ಪೈಯವರಿಗೆ ದೊರಕಿದ ಅನೇಕ ಬಹುಮಾನಗಳ ಪ್ರದರ್ಶನ ಮತ್ತು ಭವನದ ಶಿಲ್ಪ ಕಲೆ, ಶುಚಿತ್ವ ಎಲ್ಲವನ್ನೂ ನೋಡಿ ತಿಳಿದುಕೊಳ್ಳ ಬೇಕಾದದ್ದು ಅನೇಕ, ಅವರ ಭವನದ ದೇವರ ಕೋಣೆಯನ್ನು ನೋಡಿದರೆ ಅವರ ದೈವ ಭಕ್ತಿಯನ್ನು ಎತ್ತಿ ಸಾರಿರುವ ಸಂಕೇತವಾಗಿದೆ. ಶ್ರೀಮತಿ ಪೈಯವರ ಗುಣವನ್ನು ಅವರ ಸಹನೆ ಹಾಗೂ ಸುಶೀಲತೆಯನ್ನು ಎಲ್ಲರೂ ಮೆಚ್ಚುವಂತದ್ದು. ಬೆಂಗಳೂರಿನಲ್ಲೊಂದು ನೆಲೆಯೂರಿರುವ ಈ ಮಲೆನಾಡಿನ ಸುಂದರ ದೃಶ್ಯವನ್ನು ಎಲ್ಲರೂ ಮರೆಯದೆ ನೋಡಬೇಕಾಗಿದೆ. ಹೀಗೆ ಎಲ್ಲಾ ದೃಶ್ಯಗಳನ್ನು ನೋಡಿ, ಆನಂದಿಸಿ, ಅಲ್ಲಿಯೇ ಸಾಮೂಹಿಕವಾಗಿ ಊಟ ಮುಗಿಸಿ, ಅಲ್ಪ ಸಮಯ ವಿವಿಧ ರೀತಿಯ ವಿನೋದಾವಳಿಯೊಂದಿಗೆ ಅಂದಿನ ಪ್ರವಾಸವನ್ನು ಮುಗಿಸಲಾಯಿತು.

- ಶ್ರೀಮತಿ ಕಾವೇರಿರ ಬೋಜಮ್ಮ, ಬೋಜಪ್ಪನವರಿಂದ ಸಂಕ್ಷಿಪ್ತ ವರದಿ.

---

ಕನ್ನಡದ ಮೊದಲ ರಾಷ್ಟ್ರ ಕವಿ - ಎಂ. ಗೋವಿಂದ ಪೈ

# ವ್ಯಕ್ತಿ ಪರಿಚಯ : ಪಾಣತ್ತಲೆ ಪೊನ್ನಪ್ಪ ರಾಮಯ್ಯ



ಕೊಡಗಿನ ಭಾಗಮಂಡಲ ನಾಡಿನಲ್ಲಿ ಸಂಣ ಪುಲಿಕೋಟು ಗ್ರಾಮದ ಪಾಣತ್ತಲೆ ಪೊನ್ನಪ್ಪ ರಾಮಯ್ಯ ಈಗ ನಿವೃತ್ತ ಉಪ ಅರಣ್ಯ ಸಂರಕ್ಷಣಾಧಿಕಾರಿ ಯಾಗಿದ್ದು, ಹಾಲಿ ದಾವಣಗೆರೆಯಲ್ಲಿ ವಾಸವಾಗಿದ್ದಾರೆ. ತಂದೆ ಪೊನ್ನಪ್ಪ ಮತ್ತು ತಾಯಿ ಗೌರಮ್ಮನವರ ಪುತ್ರರಾಗಿ ದಿನಾಂಕ 29-5-1941 ರಲ್ಲಿ ಜನಿಸಿದ ಇವರು B.Sc., ಪದವೀಧರ ಹಾಗೂ ಸಾಮಾಜಿಕ ಅರಣ್ಯದಲ್ಲಿ ಡಿಪ್ಲೊಮೊ ಮಾಡಿರುತ್ತಾರೆ.

ಶ್ರೀಯುತರ ಪ್ರಾಥಮಿಕ ವಿದ್ಯಾಭ್ಯಾಸವು ಭಾಗಮಂಡಲ ನಾಡಿನ ಕೋರಂಗಾಲ ಗ್ರಾಮದಲ್ಲಿಯೂ (1947-52) ಮಾಧ್ಯಮಿಕ ವಿದ್ಯೆಯು ಚೆಟ್ಟಿಯಾನಿ ಶಾಲೆಯಲ್ಲಿಯೂ (1952-55)ಪ್ರೌಢ ವಿಧ್ಯಾಭ್ಯಾಸವು ನಾಪೋಕ್ಲು ಸರ್ಕಾರಿ ಪ್ರೌಢ ಶಾಲೆಯಲ್ಲಿಯೂ (1955-58) ಹಾಗೂ ಪದವಿಯನ್ನು (1958-63) ಮಡಿಕೇರಿ ಸರ್ಕಾರಿ ಕಾಲೇಜಿನಲ್ಲಿಯೂ ಮುಂದುವರಿಯಿತು. ಡಿಗ್ರಿ ಸಮಯದಲ್ಲಿ ಮಾಜಿ ಮಂತ್ರಿಗಳಾದ ದಂಬೆಕೋಡಿ ಚಿಣಪ್ಪನವರ ಮನೆಯೇ ಇವರ ವಾಸಸ್ಥಳವಾಗಿತ್ತು. ಅಂದಿನ ಇವರ ಸಹಕಾರ ಸಹಾನುಭೂತಿಯೇ ಇಲ್ಲಿಯತನಕ ಮುಂದುವರಿಯಲು ಸಾಧ್ಯವಾಯಿತೆಂದು ಇಂದು ಸಹ ನೆನಪಿಸಿಕೊಳ್ಳುತ್ತಾರೆ ಶ್ರೀ ರಾಮಯ್ಯನವರು.

1966 ರಲ್ಲಿ ಅರಣ್ಯ ಇಲಾಖೆಯಲ್ಲಿ ವಲಯ ಅರಣ್ಯ ಅಧಿಕಾರಿ (RFO) ಹುದ್ದೆಗೆ ಆಯ್ಕೆ ಆಗಿ 1966-68 ರಲ್ಲಿ ಕೊಯಮುತ್ತೂರು ಅರಣ್ಯ ವಿಶ್ವ ವಿದ್ಯಾನಿಲಯದಲ್ಲಿ ತರಭೇತಿ ಪಡೆದು, 144 ವಿದ್ಯಾರ್ಥಿಗಳಲ್ಲಿ 8 ನೇ ರ್‍ಯಾಂಕಿನಲ್ಲಿ ಮೈಸೂರು ರಾಜ್ಯದ 20 ಅಭ್ಯರ್ಥಿಗಳಲ್ಲಿ ಮೊದಲ ರ್‍ಯಾಂಕ್ ವಿಜೇತರಾಗಿಯೂ, ಮೈಸೂರು ಹಾಗೂ ಮದ್ರಾಸ್ ರಾಜ್ಯವನ್ನೊಳಗೊಂಡ ಅಭ್ಯರ್ಥಿಗಳಲ್ಲಿ ಮೊದಲಿಗರಾಗಿ ಚಿನ್ನದ ಪದಕ ಗಿಟ್ಟಿಸಿ ದಿನಾಂಕ 2-11-1968 ರಲ್ಲಿ ಕರ್ನಾಟಕ ಅರಣ್ಯ ಇಲಾಖೆಯಲ್ಲಿ ವಲಯ ಅರಣ್ಯಾಧಿಕಾರಿಯಾಗಿ ನೇಮಿಸಲ್ಪಟ್ಟರು. ಕಾರಣಾಂತರಗಳಿಂದ I.F.S.ಗೆ ಆಯ್ಕೆಯಾಗುವುದು ಸ್ವಲ್ಪದರಲ್ಲಿ ತಪ್ಪಿತು. ಇವರ ತಂಡದಲ್ಲಿ ಮೊದಲಿಗನಾಗಿದ್ದರೆ ಖಂಡಿತ ತನ್ನಿಂದ ತಾನೇ ಆಯ್ಕೆಯಾಗುವ ಸುವರ್ಣಾವಕಾಶ ತಪ್ಪಿತೆನ್ನುವ ಕೊರಗು ಇಂದಿಗೂ ಶ್ರೀಯುತರನ್ನು ಕಾಡುತ್ತಿದೆ.

ಹೀಗೆ ಅರಣ್ಯ ಇಲಾಖೆಗೆ ಸೇರಿ 1968-72ರ ವರೆಗೆ ಮೈಸೂರು ಕಾರ್ಯ ಯೋಜನೆಯಲ್ಲಿ ಕೆಲಸ ನಿಭಾಯಿಸಿದರು. ಈ ಸಂದರ್ಭದಲ್ಲಿ ಮೈಸೂರು "ಖೆಡ್ಡಾ"ದಲ್ಲಿ ಅವಕಾಶ ಸಿಕ್ಕಿತು. ಹಾಗೂ 2 ವರ್ಷವೂ ದಸರಾ ವಸ್ತು ಪ್ರದರ್ಶನದಲ್ಲಿ ಅರಣ್ಯ ಇಲಾಖೆಯ ವತಿಯಿಂದ ಮಳಿಗೆ ತೆರೆಯುವ ಹಾಗೂ ನಿರ್ವಹಿಸುವ ಕಾರ್ಯವನ್ನು ನಿರ್ವಹಿಸಿದರು. ಆ ಎರಡು ವರ್ಷವು ಅರಣ್ಯ ಇಲಾಖೆಗೆ ಪ್ರಥಮ ಬಹುಮಾನ ಬಂದಿದೆಯೆಂದು ಹೆಮ್ಮೆಯಿಂದ ಹೇಳುವರು.

ತದನಂತರ 1972ರಿಂದ75 ರ ವರೆಗೆ ಕೋಲಾರ ಅರಣ್ಯ ವಿಭಾಗದಲ್ಲಿಯೂ 1975ರಿಂದ 78ರ ತನಕ ಭದ್ರಾವತಿಯಲ್ಲಿ ಉಂಬಳೆ ಬೈಲು ವಲಯದಲ್ಲಿಯೂ, 1978 ರಿಂದ 90 ರವರೆಗೆ ಚಿಕ್ಕ ಮಂಗಳೂರಿವ ಕೊಪ್ಪ ವಿಭಾಗದ ನರಸಿಂಹರಾಜಪುರ ವಲಯದಲ್ಲೂ 1990-91 ರಲ್ಲಿ ಶಿವಮೊಗ್ಗ ನಗರದಲ್ಲಿ ಭೂಸ್ವಾಧೀನ ಇಲಾಖೆಗೆ ಸಂಬಂಧ ಪಟ್ಟಂತೆ 27 ಗ್ರಾಮಗಳಲ್ಲಿ ಮುಳುಗಡೆ ಪ್ರದೇಶದಲ್ಲಿರುವ (ವರಾಹಿ ಅಣೆಕಟ್ಟು ಪ್ರದೇಶ)ರೈತರ ಜಮೀನಿನಲ್ಲಿದ್ದ ಮರಗಳ ಬೆಲೆ ನಿಗಿದಿ ಮಾಡುವ ಕೆಲಸದಲ್ಲೂ 1991-94 ರವರೆಗೆ ಚಿಕ್ಕ ಮಂಗಳೂರಿನ ಕೊಪ್ಪ ವಿಭಾಗದ ಚಿಕ್ಕ ಅಗ್ರಹಾರ ವಲಯದಲ್ಲಿ ವಲಯಾಧಿಕಾರಿಯಾಗಿ ಸುಮಾರು 16 ವರುಷ ವಲಯಾಧಾಕಾರಿಯಾಗಿರುವ ಸಮಯದಲ್ಲಿ ಇವರ ಮುಂದೆ ಏನೆ ತರಹದ ಸಮಸ್ಯೆಗಳು ಎದುರಾದಾಗ ಸಹ ಬುದ್ಧಿವಂತಿಕೆಯಿಂದ ಬಗೆಹರಿಸಿದವು. ಹಲವಷ್ಟು.

ಸರ್ಕಾರವು ಇವರಿಗೆ 1984 ರಲ್ಲಿ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯಾಗಿ ಬಡ್ತಿ (A.C.F.) ನೀಡಿತು. ಬಡ್ತಿಯ ನಂತರ ತುಮಕೂರು, ದಾವಣಗೆರೆ, ಬೆಳಗಾವಿ, ಚಿತ್ರದುರ್ಗದಲ್ಲಿ ಕರ್ತವ್ಯ ನಿರ್ವಹಿಸಿದ್ದಾರೆ. 1986-87 ಡೆಹರಾಡೂನ್‌ನಲ್ಲಿ ಡಿಪ್ಲೋಮೊವನ್ನು ಸಹ ಪಡೆದಿರುವರು.

1995 ರಲ್ಲಿ ಪುನಹಃ ಸರ್ಕಾರ ಬಡ್ತಿ ನೀಡಿ ಉಪ ಅರಣ್ಯಯ ಸಂರಕ್ಷಣಾಧಿಕಾರಿ (DCF Or DFO) ಶಿವಮೊಗ್ಗ ಅರಣ್ಯ ವಿಭಾಗದಲ್ಲಿ ಬರುವ ಪಶ್ಚಿಮಘಟ್ಟ ಅರಣ್ಯ ಅಭಿವೃದ್ಧಿ ಯೋಜನೆಯಡಿ ಜಂಟಿ ಅರಣ್ಯ ಯೋಜನೆ ಮತ್ತು ನಿರ್ವಹಣೆಯ ಜವಾಬ್ದಾರಿ ವಹಿಸಲಾಯಿತು. ಶ್ರೀಯುತರ ಉತ್ತಮ ಗುಣಮಟ್ಟದ ಸೇವೆಯನ್ನು ಪರಿಗಣಿಸಿ ತೀರ್ಥಹಳ್ಳಿ ಶಾಸಕ ಶ್ರೀ ಆರಗ ಜ್ಞಾನೇಂದ್ರ ಅರಣ್ಯ ಸಮಿತಿಯ ಅಧ್ಯಕ್ಷರು ಸಾರ್ವಜನಿಕರು ಸೇರಿ ಸನ್ಮಾನಿಸಿರುವರು. 31-10-1998 ರಲ್ಲಿ 30 ವರ್ಷಗಳ ಅನನ್ಯ ಸೇವೆಯಿಂದ ನಿವೃತ್ತರಾದರು ಸಹ 1998 ನವಂಬರ್‌ನಲ್ಲಿ ಸರ್ಕಾರವು ಇವರ ಅಪಾರ ಅನುಭವದ ಸೇವೆಯನ್ನು ಪರಿಗಣಿಸಿ ಜಪಾನ್ ದೇಶದ ಸಹಯೋಗದೊಂದಿಗೆ ಪ್ರಾರಂಭಿಸಿದ ಬಯಸು ಸೀಮೆ ಅಭಿವೃದ್ಧಿ ಯೋಜನೆಯಡಿ ಗ್ರಾಮ ಅರಣ್ಯ ಸಮಿತಿ ರಚಿಸಲು ಮತ್ತು ಸಿಬ್ಬಂದಿಯವರಿಗೆ ತರಭೇತಿ ನೀಡಲು ಸಂಪನ್ಮೂಲ ವ್ಯಕ್ತಿ (Reserve Person) ಆಗಿ ನೇಮಿಸಿಕೊಂಡರೂ ಅದರಂತೆ ಇವರು ಬೆಂಗಳೂರು ನಗರ, ಗ್ರಾಮಾಂತರ ಮತ್ತು ಕೋಲಾರ ಜಿಲ್ಲೆಗಳಲ್ಲಿ ಹಲವಾರು ಗ್ರಾಮ ಅರಣ್ಯ ಸಮಿತಿಗಳನ್ನು ರಚಿಸಿದ್ದೆ ಅಲ್ಲದೆ ಬೆಂಗಳೂರು ಸುತ್ತ ಮುತ್ತ ಸುಮಾರು 84 ಕೆರೆಗಳ ಅಭಿವೃದ್ಧಿಯಾದಾಗ ಸಮಗ್ರ ಕೆರೆ ಅಭಿವೃದ್ಧಿ ಸಮಿತಿ (Lake Management Committee) ವರದಿಯನ್ನು ಸರ್ಕಾರ ಕೇಳಿತು.

1972 ರಲ್ಲಿ ಚಿಕ್ಕ ಮಂಗಳೂರು ಕೊಪ್ಪ ನಿವಾಸಿ ಕರ್ಣಯ್ಯನ ಉತ್ತಪ್ಪನವರ ಮಗಳು ರಾಣಿ ಲಕ್ಷ್ಮಿ ದೇವಿಯವರೊಡನೆ ವಿವಾಹವಾಗಿ ಒಬ್ಬಳು ಹೆಣ್ಣು ಮತ್ತು ಒಬ್ಬ ಗಂಡು ಮಗನಿದ್ದಾರೆ. ಮಗಳು ಕೃತಿ ವೈದ್ಯೆಯಾಗಿರುವಳು. ಮಗ ಕೌಶಿಕ್ ಚಾರ್ಟರ್ಡ್ ಅಕೌಂಟೆಂಟ್ ಮಾಡುತ್ತಿರುವನು. ಇವರಿಗೆ ಇತ್ತೀಚೆಗೆ ಲಘು ಹೃದಯಾಘಾತವಾಗಿದ್ದರಿಂದ ಎಲ್ಲಾ ಹಿತ ದೃಷ್ಟಿಯ ಕಾರ್ಯಗಳು ನೆನೆಗುದಿಗೆ ಬಿದ್ದಿದೆ. ಮಡಿಕೇರಿ ಗೌಡ ಸಮಾಜ ಕಟ್ಟಡಕ್ಕೆ Rs. 5005/- ದೇಣಿಗೆ ನೀಡಿದುದಲ್ಲದೆ ಗೌಡ ವಿದ್ಯಾ ಸಂಘಕ್ಕೂ ಧನ ಸಹಾಯ ಮಾಡಿದ್ದಾರೆ.

ಲೇಖನ : ಪಟ್ಟಡ ಪ್ರಭಾಕರ.

ಕನ್ನಡದ ಮೊದಲ ಗ್ರಂಥ - ಕವಿರಾಜಮಾರ್ಗ

# ಕೊಡಗು ಗೌಡ ಸಮಾಜ (ರಿ.) ಬೆಂಗಳೂರು ಕೈಲುಮುಹೂರ್ತ ಹಬ್ಬದ ಪಕ್ಷಿನೋಟ.

ಪ್ರತಿ ವರ್ಷದಂತೆ ಈ ಬಾರಿ ಕೂಡಾ ಕೊಡಗು ಗೌಡ ಸಮಾಜದ ಆಶ್ರಯದಲ್ಲಿ ಕೈಲು ಮುಹೂರ್ತ ಹಬ್ಬ ಮತ್ತು ಸಾಂಸ್ಕೃತಿಕ ಕಾರ್ಯಕ್ರಮವನ್ನು ತಾ. 8-9-2002ರಂದು ಸಾಂಪ್ರದಾಯಿಕವಾಗಿ ಆಚರಿಸಲಾಯಿತು.

ಸುಮಾರು 800 ಕ್ಕೂ ಹೆಚ್ಚಿನ ಗೌಡ ಬಾಂಧವರು ಹಾಜರಿದ್ದರು. ಈ ಬಾರಿ ಸಾಂಸ್ಕೃತಿಕ ಕಾರ್ಯಕ್ರಮಗಳಾದ ನೃತ್ಯ ಹಾಡು ಸಂಗೀತ ಇತ್ಯಾದಿಗಳಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಲಾಗಿತ್ತು. ಸಮಾರಂಭವು ಆಯುಧ ಪೂಜೆಯೊಂದಿಗೆ ಪ್ರಾರಂಭವಾಗಿ ಸಭೆಯ ಮುಖ್ಯ ಅತಿಥಿಗಳಾಗಿ ಡಾ. ರಾಮೇಗೌಡರು (ಮಾಜಿ, ಛೇರ್‌ಮನ್, ಎ. ಐ. ಟಿ. ಇ.) ಮುಖ್ಯಮಂತ್ರಿಗಳ ವಿಶೇಷ ಅಧಿಕಾರಿ ಶ್ರೀಮಾನ್ ಕರ್ಣಯ್ಯನ ಅಪ್ಪಯ್ಯನವರು ಮತ್ತು ಮಡಿಕೇರಿ ಪುರಸಭಾಧ್ಯಕ್ಷೆ ಕೂಡಕಂಡಿ ಕಾವೇರಮ್ಮನವರು ಭಾಗವಹಿಸಿದ್ದರು. ಮನೋರಂಜನಾ ಕಾರ್ಯಕ್ರಮಗಳಲ್ಲಿ ನೃತ್ಯಗಳು ತುಂಬಾ ಆಕರ್ಷಕವಾಗಿದ್ದು, ಅದರಲ್ಲೂ ಬಾಲ ಪ್ರತಿಭೆಗಳು ಎಲ್ಲರ ಗಮನ ಸೆಳೆದವು.

ಸಮಾಜವು ಈ ಬಾರಿಯು ಕೂಡಾ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಗೌರವ ಬಹುಮಾನವನ್ನು ನೀಡಿತು. ಅತೀ ಹೆಚ್ಚಿನ ಅಂಕಗಳನ್ನು ಗಳಿಸಿದ ಪಿ. ಯು. ಸಿ. ಮತ್ತು ಬಿ. ಇ. ಪ್ರತಿಭಾವಂತರು ಬಹುಮಾನಗಳನ್ನು ಪಡೆದುಕೊಂಡರು. ಅಂತರಾಷ್ಟ್ರ ಮಟ್ಟದಲ್ಲಿ ಆಡಿದ ಪುಟ್‌ಬಾಲ್‌ಆಟಗಾರ ಬೆಪ್ಪುರನ ಅಣ್ಣಪ್ಪನವರನ್ನು ಶಾಲು ಹಾರ ಹಾಕಿ ಸನ್ಮಾನಿಸಲಾಯಿತು.

ಬೆಂಗಳೂರಿನ ಕೊಡಗು ಗೌಡ ಸಮಾಜದ ಸ್ಥಾಪಕ ಅಧ್ಯಕ್ಷರಾಗಿದ್ದ ಶ್ರೀಮಾನ್ ತೋಟಂಬೈಲು ಬೆಳ್ಳಿಯಪ್ಪನವರು ಮತ್ತು ಸಮಾಜದ ಮಾಜಿ ಅಧ್ಯಕ್ಷರಾದ ಶ್ರೀಮಾನ್ ಅಮ್ಮವ್ವನ ವಾಸುರವರು ಹಾಗೂ ಮೈಸೂರಿನ ಮಾಜಿ ಮೇಯರ್ ವಾಸುರವರು, ಶ್ರೀ ಚೆನ್ನಪ್ಪಗೌಡರು ಮತ್ತಿತರ ಗಣ್ಯ ವ್ಯಕ್ತಿಗಳು ಸಭೆಯಲ್ಲಿ ಉಪಸ್ಥಿತರಿದ್ದರು. ಮುಖ್ಯ ಅತಿಥಿಗಳಾದ ಶ್ರೀಮಾನ್ ರಾಮೇಗೌಡರು ತಮ್ಮ ಬಾಲ್ಯ ಜೀವನದ ಅನುಭವಗಳನ್ನು ಬಹಳ ಸೊಗಸಾಗಿ ಸಭಿಕರಲ್ಲಿ ಹಂಚಿ ಕೊಂಡರಲ್ಲದೆ ನಮ್ಮ ರಾಷ್ಟ್ರಪತಿಗಳಾದ ಶ್ರೀ ಅಬ್ದುಲ್ ಕಲಾಂರಂತಹ ಮಹನೀಯರ ಆಪ್ತ ಸ್ನೇಹ ಅವರಿಗೆ ಸುಮಾರು ಇಪ್ಪತ್ತೈದು ವರ್ಷದ ಅನುಭವ ಕಲಾಂರೊಂದಿಗೆ ಇದೆ ಎಂದು ಬಹಳ ಸ್ನೇಹಪೂರಿತವಾಗಿ ನುಡಿದರು. ಮಾನ್ಯ ಮುಖ್ಯ ಮಂತ್ರಿಗಳ ವಿಶೇಷ ಅಧಿಕಾರಿಗಳಾಗಿರುವ ಶ್ರೀಮಾನ್ ಕರ್ಣಯ್ಯನ ಅಪ್ಪಯ್ಯನವರು, ನಮ್ಮ ಜನಾಂಗದ ಅಭಿವೃದ್ಧಿ ಸಂಸ್ಕೃತಿಯ ಬಗ್ಗೆ ಮತ್ತು ಸಮಾಜದ ಏಳಿಗೆಯ ಬಗ್ಗೆ ಹಿತವಚನ ನೀಡಿದರು. ಹಾಗೆಯೇ ಮಡಿಕೇರಿ ನಗರ ಸಭೆಯ ಪ್ರಥಮ ಪ್ರಜೆ, ನಮ್ಮ ಜನಾಂಗದ ಪ್ರಪಥಮ ಮಹಿಳಾ ಪುರಸಭಾಧ್ಯಕ್ಷೆ ಶ್ರೀಮತಿ ಕೂಡಕಂಡಿ ಕಾವೇರಮ್ಮನವರು ಸಮಾರಂಭವನ್ನು ಉದ್ದೇಶಿಸಿ ಮಾತನಾಡುತ್ತ, ಗೌಡ ಜನಾಂಗದ ಉಡುಗೆ, ಭಾಷೆ ಸಂಸ್ಕೃತಿಗಳನ್ನು ಅಳಿಸದೆ ಉಳಿಸಿಕೊಂಡುಬರುವಂತೆ ಕೇಳಿಕೊಂಡರು. ಸಮಾಜದ ಅಧ್ಯಕ್ಷರಾದ ಶ್ರೀಮಾನ್ ಕೋಳಿಬೈಲು ಬೆಳ್ಳಿಯಪ್ಪನವರು ಅಧ್ಯಕ್ಷರ ಪ್ರಸ್ತಾವನೆಯಲ್ಲಿ ಕರೆಗೆ ಓಗೊಟ್ಟು ಆಗಮಿಸಿರುವ ಅತಿಥಿಗಳನ್ನು ಮತ್ತು ಬಂಧು ಮಿತ್ರರನ್ನು ವಂದಿಸಿದರು.

ಸಮಾರಂಭದ ಕಾರ್ಯಕ್ರಮಗಳನ್ನು ಕಾರ್ಯದರ್ಶಿ ಶ್ರೀಮಾನ್ ಕುದುಪಜೆ ಗಣಪತಿಯವರು ನಿರೂಪಿಸಿ ನಡೆಸಿಕೊಟ್ಟರು. ವಂದನಾರ್ಪಣೆಯನ್ನು ಶ್ರೀ ಬಾರಿಕೆ ರಾಘವಯ್ಯನವರು ನೆರವೇರಿಸಿದರು. ಮಧ್ಯಾಹ್ನದ ಭೋಜನದೊಂದಿಗೆ ಸಭೆ ಮುಕ್ತಾಯವಾಯಿತು.

ವರದಿ: **ಕುದುಪಜೆ ಸೀತಾ ಗಣಪತಿ.**

---

4 ನೇ ಪುಟದಿಂದ

***ಕೊ. ಸಂ.: ವಿದ್ಯಾರ್ಥಿಗಳಿಗೆ ನಿಮ್ಮ ಕಿವಿ ಮಾತೇನು?***

*ಉ :* ಇಂದು ವಿದ್ಯಾರ್ಥಿಗಳು ಮತ್ತುಗುರುಗಳ ನಡುವೆ ಅಂತರ ಹೆಚ್ಚಾಗುತ್ತಿದೆ. ಅದು ತಪ್ಪಬೇಕು. ವಿದ್ಯಾರ್ಥಿಗಳು ಗುರುಗಳೊಂದಿಗೆ ನಿಕಟ ಸಂಪರ್ಕವಿಟ್ಟುಕೊಂಡು ತಮ್ಮ ಸಮಸ್ಯೆಗಳನ್ನು ಬಗೆಹರಿಸಿ ಕೊಳ್ಳಬೇಕು. ನಂತರ ಸಮಾಜಕ್ಕೆ ಸಹಕಾರಿಯಾಗುವ ರೀತಿಯಲ್ಲಿ ಅವರು ನಡೆದುಕೊಳ್ಳಬೇಕು. ನಂತರ ಸಮಾಜಕ್ಕೆ ಸಹಕಾರಿಯಾಗುವ ರೀತಿಯಲ್ಲಿ ಅವರು ನಡೆದುಕೊಳ್ಳಬೇಕು. ಕೇವಲ ಫಲಿತಾಂಶದ ಕಡೆಗೆ ಮಾತ್ರ ಮುಖ ಮಾಡದೆ ಸಮಾಜದಲ್ಲಿ ಸತ್ಪ್ರಜೆಗಳೆನ್ನಿಸಿ ಕೊಳ್ಳುವಂತಾಗಬೇಕು. ದೂರದರ್ಶನದಂತಹ ಮಾಧ್ಯಮಗಳಿಂದ ಪ್ರಯೋಜನ ಪಡೆಯಬೇಕೇ ವಿನಹ ಸದಾ ಅದರ ಮುಂದೆ ಕುಳಿತುಕೊಂಡು, ಅನಗತ್ಯವಾದುದನ್ನು ನೋಡುತ್ತಾ, ಸಮಯ ಮನಸ್ಸುಗಳನ್ನು ಹಾಳು ಮಾಡಬಾರದು.

ಒಟ್ಟಾರೆಯಾಗಿ ಶಿಕ್ಷಣ ರಂಗದ ಏಳಿಗೆಗೆ ಪೋಷಕರು, ಸರಕಾರ ವಿದ್ಯಾರ್ಥಿಗಳು, ಶಿಕ್ಷಕರು, ಒಟ್ಟಾಗಿ ದುಡಿಯಬೇಕು ಎಂದು ಹೇಳುವ ಶ್ರೀಮತಿ ಜಯಶೀಲಾರವರು ತಮ್ಮ ಸೇವೆಯ ಹಿಂದೆ ಹಾಗೂ ತಮ್ಮ ಸಾಧನೆಯ ಹಿಂದೆ ತಮ್ಮ ಪತಿಯ ಪೂರ್ಣ ಸಹಕಾರವಿದೆ ಎಂದು ಹೇಳುವುದನ್ನು ಮರೆಯುವುದಿಲ್ಲ. 1974 ರಲ್ಲಿ ತೆಕ್ಕಡೆ ಮುತ್ತಣ್ಣನವರನ್ನು ವಿವಾಹವಾಗಿರುವ ಇವರಿಗೆ ಆರತಿಗೊಬ್ಬಳು ಮಗಳು, ಕಿರುತಿಗೊಬ್ಬ ಮಗ, ಇಬ್ಬರೂ ಮಕ್ಕಳೂ ಸಾಫ್ಟ್‌ವೇರ್ ಇಂಜಿನಿಯರುಗಳು, ಮಗ ಅಭಿಜಿತ್ ವಿವಾಹವಾಗಿ ಅಮೆರಿಕದಲ್ಲಿ ಉದ್ಯೋಗ ನಿರ್ವಹಿಸಿದರೆ, ಮಗಳು ಜಾಹ್ನವಿ ಕುಯ್ಯಮುಡಿ ಸುಜಿತರವರನ್ನು ವಿವಾಹವಾಗಿ ಬೆಂಗಳೂರಿನಲ್ಲಿ ನೆಲೆಸಿದ್ದಾರೆ. ಸುಜಿತ್‌ರವರೂ ಸಹ ಸಾಫ್ಟ್‌ವೇರ್ ಇಂಜಿನೀಯರ್ ಆಗಿದ್ದಾರೆ. ತೆಕ್ಕಡೆ ಮುತ್ತಣ್ಣನವರು ಭಾಗಮಂಡಲ ಕಾವೇರಿ ಕಾಲೇಜು ಮತ್ತು ಮಡಿಕೇರಿಯ ಸಾಂತ ಮೈಕಲರ ಪ್ರೌಢ ಶಾಲೆಯಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ಶ್ರೀಮತಿ ಜಯಶೀಲಾರವರೂ ಸಹ ಈ ಶೈಕ್ಷಣಿಕ ವರ್ಷದ ಅಂತ್ಯಕ್ಕೆ ನಿವೃತ್ತರಾಗಲಿದ್ದಾರೆ.

ಗೌಡ ಜನಾಂಗದ ಬಗ್ಗೆ ಇವರಿಬ್ಬರಿಗೂ ಅಪಾರ ಅಭಿಮಾನವಿದೆ. ಹಿಂದೆ ನಮ್ಮ ಜನಾಂಗಕ್ಕೆ ಪ್ರೋತ್ಸಾಹಿರಲಿಲ್ಲ ಮೇಲಾಗಿ ಕೀಳರಿಮೆ ಇತ್ತು ಎಂದು ಒತ್ತುಹೇಳುವ ಇವರು ವಿಶಾಲ ನೆಲೆಗಟ್ಟಿ ನಡಿಯಲ್ಲಿ ಗೌಡ ಜನಾಂಗ ಒಂದು ಗೂಡಿ ಮೇಲೆ ಬರ ಬೇಕೆನ್ನುತ್ತಾರೆ. ಶ್ರೀಮತಿ ಜಯಶೀಲಾರವರು ತಮ್ಮ ಅವಿರತ ಶ್ರಮ, ಶ್ರದ್ಧೆ, ಸಮರ್ಪಣೆ, ನಿಸ್ವಾರ್ಥ ದುಡಿಮೆಯಿಂದ ಶಿಕ್ಷಣ ಕ್ಷೇತ್ರದಲ್ಲಿ ಜಯಶೀಲರಾಗಿದ್ದಾರೆ. ಶಿಕ್ಷಣ ಕ್ಷೇತ್ರದಿಂದ ನಿವೃತ್ತರಾದಮೇಲೆ ಇವರ ಮೌಲ್ಯಾಧಾರಿತವಾದ ಮಾರ್ಗದರ್ಶನ ಗೌಡ ಜನಾಂಗದ ಸರ್ವತೋಮುಖ ಬೆಳವಣಿಗೆಗೆ ಗೌಡ ಸಂಘಗಳಿಗೆ ಸದಾ ದೊರೆಯುತ್ತಿರಲೆಂಬುದೇ ಸಂಗಾತಿಯ ಆಶಯವಾಗಿದೆ.

**-ಪಟ್ಟಡ ಶಿವಕುಮಾರ್.**

# ಕೊಡಗು ಮತ್ತು ದ. ಕ. ಗೌಡರ ವಿದ್ಯಾ ಸಂಘ : ಹಾಸನ ಕೈಲ್ ಪೊಳ್ದ್ ಹಬ್ಬ ಮತ್ತು ಗೌಡ ವಿದ್ಯಾ ಮಂದಿರ ನಿರ್ಮಾಣ ದತ್ತದಾಪುಗಾಲು.



ನಿಸರ್ಗದತ್ತ ಸುಂದರ ನಾಡು ಕೊಡಗು ನಾಡು, ಈ ನಾಡಿಗೆ ಒತ್ತಿನಲ್ಲಿರುವ ಜಿಲ್ಲೆಯೇ ಹಾಸನ. ಚಿತ್ರಕಲೆಗಳಿಗೆ, ಕವಿಗಳಿಗೆ ಶಿಲ್ಪಿಗಳಿಗೆ ಪ್ರಸಿದ್ಧವಾದ ನಾಡಾದ ಹಾಸನ ನಗರದಲ್ಲಿ ನಾಡಿನ ಹಿರಿಯರ ಆಶಯದಂತೆ ಸುಂದರವಾದ ಪುಟ್ಟದಾದ ಗೌಡ ವಿದ್ಯಾಮಂದಿರವನ್ನೂ ಕಟ್ಟುವ ನಿಟ್ಟಿನಲ್ಲಿ ಬರಗಾಲದ ಛಾಯೆಯ ನಡುವೆಯು ತನ್ನ ಚಿಕ್ಕ ಮೊತ್ತದ ಬಂಡವಾಳದಲ್ಲಿ ಗೌಡ ವಿದ್ಯಾಮಂದಿರ ನಿರ್ಮಾಣದಲ್ಲಿ ತನ್ನನ್ನೂ ತೊಡಗಿಸಿಕೊಳ್ಳುವ ನಿರ್ಧಾರವನ್ನೂ ಇತ್ತೀಚೆಗೆ ಕೊಡಗು ಮತ್ತು ದ. ಕ.ಗೌಡ ವಿದ್ಯಾ ಸಂಘದ ಅಧ್ಯಕ್ಷರಾದ ಕೈಬೀಲಿರ ಪೊನ್ನಣ್ಣನವರು ಕೈಲುಪೋಳ್ದ್ ಸಮಾರಂಭದಲ್ಲಿ ಪ್ರಕಟಿಸಿದರು. ಸಂಘವು ಕೈಲ್‌ಪೋಳ್ದ್ ಪ್ರಯುಕ್ತ ನಗರದ ಹೋಲಿ ಚಿಲ್ಡ್ರನ್ ಇಂಗ್ಲೀಷ್ ಕಾನ್ವೆಂಟ್‌ನಲ್ಲಿ ತನ್ನ ವಾರ್ಷಿಕ ಸಭೆಯನ್ನು ಮತ್ತು ಕೈಲ್ ಪೋಳ್ದನ್ನು ನಡೆಸಿತು.

ದಿನದ ಆಟೋಟಗಳ ಕ್ರೀಡಾ ಕಾರ್ಯಕ್ರಮದ ನಂತರ ಸುಮಾರು 12 ಗಂಟೆಗೆ ಶ್ರೀಮತಿ ಭುವನ್ ಅಶ್ವತ್‌ರ ವರಸಿದ್ಧಿ ವಿನಾಯರನ ಪ್ರಾರ್ಥನೆಯೊಂದಿಗೆ ಸಭೆಯು ಪ್ರಾರಂಭವಾಯಿತು. ಸಭೆಯ ಅಧ್ಯಕ್ಷತೆಯನ್ನು ಕೊಡಗು ಜಿಲ್ಲಾ ಪಂಚಾಯತ್ ಮಾಜಿ ಅಧ್ಯಕ್ಷರಾದ ಶ್ರೀಯುತ ಊರುಬೈಲು ಜಯಪ್ರಕಾಶ್‌ನವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಭಾಗಮಂಡಲ ಗೌಡ ಸಮಾಜದ ಅಧ್ಯಕ್ಷರಾದ ಕರಿಕೆಯ ಬೇಕಲ್ ಜಯರಾಮ್‌ಗೌಡರು ಹಾಗೂ ಚೆಟ್ಟಳ್ಳಿಯ ಖ್ಯಾತಿವೆತ್ತ ಕಾಫಿ ಬೆಳೆಗಾರರಾದ ಕೆದಂಬಾಡಿ ಮೊಣ್ಣಪ್ಪ ಪ್ರಸನ್ನನವರು ಮತ್ತು ಕೊಡಗು ಸಂಗಾತಿ ಪತ್ರಿಕೆಯ ಗೌರವ ಸಂಪಾದಕ ಪಟ್ಟಡ ಪ್ರಭಾಕರನವರು ವೇದಿಕೆಯಲ್ಲಿ ಉಪಸ್ಥಿತರಿದ್ದರು.

ಕಾರ್ಯದರ್ಶಿ ಕಲ್ಲುಮುಟ್ಲು ಲೋಕನಾಥ್‌ನವರು ವರದಿ ಮಂಡಿಸಿದ ನಂತರ ಸಂಘದ ಅಧ್ಯಕ್ಷರಾದ, ಶ್ರೀ ಪೊನ್ನಪ್ಪನವರು ನೆರೆದ ಸರ್ವರಿಗೂ ಮುಖ್ಯ ಅತಿಥಿಗಳ ಪರಿಚಯವನ್ನು ಸಂಕ್ಷಿಪ್ತವಾಗಿ ನೀಡಿದರಲ್ಲದೆ, ಇದೆ ಸಂದರ್ಭದಲ್ಲಿ ಮುಂದುವರಿದು ಮಾತನಾಡುತ್ತಾ 1973-74 ರಲ್ಲಿ ಈ ಪುಟ್ಟ ಸಂಘವು ಸ್ಥಾಪನೆ ಗೊಂಡಿದ್ದರೂ. ಇದಕ್ಕೆ ಚಾಲನೆಯಿತ್ತು, ಹಾಸನದಲ್ಲಿ 120'x80' ಅಳತೆಯ ನಿವೇಶನ ಮಂಜೂರಾತಿಗಾಗಿ ಅಲ್ಪ ಮೊತ್ತಕ್ಕೆ ಖರೀದಿಸಲು ಸಹಕರಿಸಿದವರು ಕೋಳಿಬೈಲು ಬೆಳ್ಯಪ್ಪನವರ ಅಂದಿನ ಶ್ರಮವನ್ನು ಶ್ಲಾಘಿಸುತ್ತಾ ಇದಕ್ಕಾಗಿ ಅರೆಗನ್ನಡ ಭಾಷಿಕರನ್ನು, ಕೊಡಗಿನವರನ್ನು ನೆಂಟರಿಷ್ಟರನ್ನು ಅಭಿನಂದಿಸಿದರು. ಏಳೆಂಟು ವರ್ಷಗಳು ಉರುಳಿದರು ಸಹ ಸರಿಯಾದ ಚಾಲನೆ ಸಿಗಲಿಲ್ಲವಾದರು ನಿಧಾನವೇ ಪ್ರಧಾನವೆಂದು ತಿಳಿದು ಇಂದು ಆ ಕಾರ್ಯಕ್ಕೆ ಮುನ್ನುಗ್ಗುತ್ತಿರುವುದು ಸಂತಸಕರ ಬೆಳವಣಿಗೆಯೆಂದು, ಈಗಿರುವ ಸುಮಾರು 2 ಲಕ್ಷದಷ್ಟಿರುವ ಮೊತ್ತಕ್ಕೆ ಜನಾಂಗ ಬಂಧುಗಳಿಂದಲೂ, ಸಂಘ ಸಂಸ್ಥೆಗಳಿಂದಲೂ, ದಾನಿಗಳಿಂದಲೂ, ನಿವೃತ್ತದಾರರಿಂದಲೂ ವಂತಿಗೆ ಪಡೆದು ಸುಮಾರು 8-10 ಲಕ್ಷದ ಮೊತ್ತದ ಬಂಡವಾಳದಲ್ಲಿ ಮಂದಿರ ಕಟ್ಟುವ ನಿಟ್ಟಿನಲ್ಲಿ ತಮ್ಮನ್ನುತೊಡಗಿಸಿಕೊಳ್ಳುವ ಭರವಸೆಯಿತ್ತಿರುವರು.

ಈ ಹಿಂದೆ ನಮ್ಮ ಜನಾಂಗದ ಹಿರಿಯರು ಏನು ಬಯಸಿತ್ತೊ ಅದನ್ನೆ ನನಸು ಮಾಡಲು ಹೊರಟ ಪೊನ್ನಣ್ಣ ಮತ್ತು ಪದಾಧಿಕಾರಿಗಳ ಪ್ರಥಮ ಆದ್ಯತೆಯಾಗಿ ಬೇಬಿಸಿಟ್ಟಿಂಗ್, LKG/UKG/ಪ್ರಾಥಮಿಕ ಶಿಕ್ಷಣ, ಪರ ಊರಿನಿಂದ ಬರುವ ವಿದ್ಯಾರ್ಥಿಗಳಿಗೆ ಬಾಡಿಗೆ ರೂಪದಲ್ಲಿ ಕೋಣೆಗಳನ್ನು ನೀಡುವುದು ಇತ್ಯಾದಿಗಳು ಅನಿವಾರ್ಯ ವೆನಿಸಿದೆಯೆಂದು ಅಭಿಪ್ರಾಯಿಸಿದ್ದಲ್ಲದೆ ಜನಾಂಗ ಬಂಧುಗಳಿಂದ ಹೆಚ್ಚಿನ ಪ್ರೋತ್ಸಾಹ ಧನ ಸಹಾಯದ ನಿರೀಕ್ಷೆಯಲ್ಲಿರುವ, ಈ ಸಾಧನೆಗಾಗಿ 9 ತಿಂಗಳ ನಂತರ ತನ್ನ ಉದ್ಯೋಗದಿಂದ ನಿವೃತ್ತಿಯಾದ ಸನಿಹದಲ್ಲೇ ತನ್ನ ಪದಾಧಿಕಾರಿಗಳೊಡನೆ ಈ ಮೇಲಿನ ಚಟುವಟಿಕೆಗಳಿಗೆ ಆದ್ಯತೆ ನೀಡಿ ಬಂಧುಗಳ ಸಮೀಪ ಯಾತ್ರಿಸಲು ದೃಢ ಸಂಕಲ್ಪದಿಂದ ನಿಶ್ಚಯಿಸಿರುವ ಇವರ ಸಹಾಯಕ್ಕೆ ಶುಭ ಕೋರೋಣ.

ಮುಖ್ಯ ಅತಿಥಿಯಾಗಿ ಆಗಮಿಸಿದ್ದ ಬೇಕಲ್ ಜಯರಾಮಗೌಡರು ನಾವೆಲ್ಲರು ಒಂದೆ. ಐಕ್ಯತೆ , ಏಕತೆ, ಸಂಘಟನೆ ಬೇಕು. ಭಾಷೆ ಸಂಸ್ಕೃತಿ ಬಗ್ಗೆ ಅಭಿಯಾನ ಬೇಕು.

18ನೇ ಪುಟಕ್ಕೆ

# ಮೈಸೂರಿನ ಗೌಡ ಮಹಿಳಾ ಒಕ್ಕೂಟ 2002 ರ ಕೈಲು ಮುಹೂರ್ತ ಹಬ್ಬ



ಕೊಡಗು ಮತ್ತು ದ. ಕ. ಜಿಲ್ಲಾ ಗೌಡ ಮಹಿಳಾ ಸಂಘದ ವತಿಯಿಂದ ಮೂರನೇ ವರ್ಷದ ಕೈಲು ಮುಹೂರ್ತ ಹಬ್ಬವು ದಿನಾಂಕ 15-9-2002ರ ಭಾನುವಾರದಂದು ಬಹಳ ವಿಜೃಂಭಣೆಯಿಂದ ನೆರವೇರಿತು. ಬೆಳಿಗ್ಗೆ 11-00ಗಂಟೆಗೆ ಔಪಚಾರಿಕವಾದ ಸ್ವಾಗತದೊಂದಿಗೆ ಮಹಿಳೆಯರಿಗೆ ಹಾಗೂ ಮಹನೀಯರುಗಳಿಗೆ ಆಟೋಟ ಸ್ಪರ್ಧೆಗಳು ನಡೆದವು. ಮಧ್ಯಾಹ್ನದ ಭೋಜನಾ ನಂತರ ಸಭಾ ಕಾರ್ಯಕ್ರಮ ನಡೆಯಿತು. ಕುಯ್ಯಮುಡಿ ಮೀನಾ ಚಂಗಪ್ಪ ಹಾಗೂ ಪಟ್ಟಡ ಶೀಲಾ ಮಣಿಯವರು ಅತಿಥಿಗಳನ್ನು ವೇದಿಕೆ ಆಹ್ವಾನಿಸಿದರು. ಕಡ್ಯದ ಶ್ಯಾಮಲ ಅವರ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ಸಂಘದ ಅಧ್ಯಕ್ಷರಾದ ದಂಬೆಕೋಡಿ ಭಾಗೀರಥಿಯವರು ಸ್ವಾಗತಿಸಿ ಅತಿಥಿಗಳ ಪರಿಚಯವನ್ನು ಮಾಡಿದರು. ಕಾರ್ಯದರ್ಶಿನಿ ಗೀತಾ ಮೋಂಟಡ್ಕ ಪ್ರಾಸ್ತಾವಿಕ ಭಾಷಣ ಮಾಡಿದರು. ಅತಿಥಿಗಳಿಗೆ ಚೆರಿಯಮನೆ ಶಾರದ ಮತ್ತು ಕೂಡಕಂಡಿ ಲಲಿತಾ ಅವರುಗಳು ಹೂಗುಚ್ಛ ಕಾಣಿಕೆಯನ್ನಿತ್ತರೆ, ನಮ್ಮ ಗೌಡ ಸಮುದಾಯದಲ್ಲೇ ಮೊತ್ತ ಮೊದಲ ಬಾರಿಗೆ ಮಹಿಳಾ ಪುರಸಭಾಧ್ಯಕ್ಷೆರಾಗಿ ಆಯ್ಕೆ ಆಗಿ, ಮಡಿಕೇರಿಯಲ್ಲಿ ಕೆಲಸ ಮಾಡುತ್ತಿರುವ ಕೂಡಕಂಡಿ ಕಾವೇರಮ್ಮ ಇವರಿಗೆ ಸಂಘದ ಅಧ್ಯಕ್ಷರಾದ ದಂಬೆಕೋಡಿ ಭಾಗೀರಥಿಯವರು ಶಾಲು ಹೊದಿಸಿ ಸನ್ಮಾನಿಸಿದರು. ಸನ್ಮಾನಕ್ಕೆ ಕೃತಜ್ಞತೆಯನ್ನು ಅರ್ಪಿಸಿ ಮುಖ್ಯ ಅತಿಥಿ ಸ್ಥಾನದಿಂದ ಮಾತನಾಡಿದ ಕೂಡಕಂಡಿ ಕಾವೇರಮ್ಮನವರು " ನಾವು ನಾಲ್ಕುಗೋಡೆಯ ಒಳಗೆ ಕುಳಿತು ಕೆಲಸ ಮಾಡಿದರೆ ಏನೂ ಆಗುವುದಿಲ್ಲ. ಹೊರಗೆ ಬರಬೇಕು. ನಮ್ಮ ಸಮುದಾಯದಿಂದ ಯಾವುದೇ ಕಾರ್ಯಕ್ರಮಗಳು ನಡೆದರೆ ಸದಸ್ಯರಾದವರು ಎಲ್ಲರೂ ಬರುವುದರ ಜೊತೆಗೆ ಇತರರನ್ನು ಕರೆತಂದು ನಮ್ಮ ಸಂಘಟನೆಯ ಮಹತ್ವದ ಅರಿವನ್ನು ಪರಸ್ಪರ ತಿಳಿಸುವಂತಾಗಬೇಕೆಂದರು. ಮನೆಯವರು ನಮ್ಮನ್ನು ಹೊರಗೆ ಬರುವುದಕ್ಕೆ ಬಿಡದಿದ್ದರೂ, ಮನೆಯವರಿಗೆ ತಿಳಿ ಹೇಳಿ ಹೊರಗೆ ಬರಬೇಕು. ಇದರ ಜೊತೆಗೆ ಮಹಿಳೆ ರಾಜಕೀಯಕ್ಕೆ ಸೇರಿದರೆ ತಪ್ಪೇನಿಲ್ಲ. ಸಂಘಗಳ ಸದಸ್ಯತ್ವ ಹೊಂದಿ ರಾಜಕೀಯಕ್ಕೆ ಸೇರಿ ಅನ್ನೋ ಕರೆ ಕೊಟ್ಟರು. ರಾಜಕೀಯದಲ್ಲಿ ಇಂದು ತಾನು ಈ ಮಟ್ಟದಲ್ಲಿ ಮೇಲೆ ಬರೋದಕ್ಕೆ ಕಾರಣರಾದ ಹಿರಿಯರನ್ನು ಈ ಸಂದರ್ಭದಲ್ಲಿ ನೆನಪಿಸಿಕೊಂಡರು. ಅಲ್ಲದೇ ನಮ್ಮ ಭಾಷೆ, ಪದ್ಧತಿ, ಸಂಪ್ರದಾಯ ಮುಂತಾದವುಗಳ ಬಗ್ಗೆ ಕಾಳಜಿ ಇರಬೇಕು ಅಂದರು".

ಇನ್ನೋರ್ವ ಮುಖ್ಯ ಅತಿಥಿ ಪಾಣ್ಣಲೆ ವಸಂತಿ ಪಳಂಗಪ್ಪ ಇವರು ಸಂಘಟನೆಯು ಒಂದು ದಿನ ಮಿಂಚಿ ಮಾಯವಾಗು ವಂತಾಗಬಾರದು ಸದಾ ಚಟುವಟಿಕೆಯಿಂದ ತುಂಬಿರಲಿ, ಸಾಂಸ್ಕೃತಿಕ ಕಾರ್ಯಕ್ರಮವನ್ನು ಹಮ್ಮಿಕೊಂಡು ಸಮುದಾಯದ ಜನರೆಲ್ಲ ಒಂದೇ ಕಡೆ ಸೇರುವಂತಾಗಿಪರಸ್ಪರ ನೋವು ನಲಿವುಗಳನ್ನು ಹಂಚಿಕೊಳ್ಳುವುದರ ಜೊತೆಗೆ ತಾವೆಲ್ಲರೂ ಒಂದೇ ಅನ್ನೋ ಮನೋಭಾವನೆ ತರುವಂತಾಗಲಿ ಎಂದು ಶುಭ ಹಾರೈಸಿದರು.

ಸಭಿಕರ ಕಡೆಯಿಂದ ತಡಿಯಪ್ಪನ ಕುಮಾರ ಜಯ ಮಾತನಾಡುತ್ತ ನಮ್ಮ ಸಮುದಾಯದ ಎಲ್ಲರೂ ಒಟ್ಟಿಗೆ ಸೇರಿ ಮೈಸೂರಿನಲ್ಲಿ ಕೈಲು ಮುಹೂರ್ತವನ್ನು ಆಚರಿಸುವಂತಾಗಬೇಕು. ಅದರಲ್ಲಿ ಶ್ರೀಮಂತ ಬಡವ ಅನ್ನೋ ಭೇದ ಭಾವ ಇರಬಾರದು. ಎಂದರು. ಅಧ್ಯಕ್ಷತೆಯನ್ನು ಸಂಘದ ಹಾಲಿ ಅಧ್ಯಕ್ಷರಾದ ದಂಬೆಕೋಡಿ ಭಾಗೀರಥಿಯವರು ವಹಿಸಿದ್ದರು. ಕಡ್ಯದ ಶ್ಯಾಮಲ ಮತ್ತುಕಡ್ಯದ ಸರೋಜಾ ಅವರು ಹಾಡುಗಳನ್ನು ಹಾಡಿದರು. ಮುಖ್ಯ ಅತಿಥಿಗಳು ಸ್ಪರ್ಧೆಯಲ್ಲಿ ಗೆದ್ದವರಿಗೆ ಬಹುಮಾನ ವನ್ನಿತ್ತರು. ಕೊಡಲಿಂಗನ ತಿಲಕ ವಂದನಾರ್ಪಣೆ ಮಾಡಿದರು. ಊಟದ ವ್ಯವಸ್ಥೆಯನ್ನು ನಿರ್ವಹಿಸಲು ಸಹಕಾರವನ್ನಿತ್ತ ಸರ್ವಸದಸ್ಯರಿಗೂ ವಿಶೇಷ ಕೃತಜ್ಞತೆಯನ್ನು ಅರ್ಪಿಸಲಾಯಿತು. ಕಾಫಿಯ ನಂತರ ಹೌಸಿಹೌಸಿ ಆಟ ನಡೆಯಿತು. ಕಾರ್ಯಕ್ರಮವನ್ನು ಕಾರ್ಯದರ್ಶಿ ಗೀತಾ ಮೋಂಟಡ್ಕ ನಿರೂಪಿಸಿದರು.

- ನಿಶಾ ಪಟ್ಟಡ.

## ರಾಜ್ಯ ಜೂನಿಯರ್ ಭಾರ ಎತ್ತುವ ಸ್ಪರ್ಧೆ ಕೊಡಗಿನ ಮಧು ಅವರಿಗೆ ರಜತ ಪದಕ



ದಕ್ಷಿಣ ಕನ್ನಡ ಜಿಲ್ಲೆಯ ವಿಟ್ಲದಲ್ಲಿ ಇತ್ತೀಚೆಗೆ ನಡೆದ 28ನೇ ರಾಜ್ಯ ಜೂನಿಯರ್ ಭಾರ ಎತ್ತುವ ಸ್ಪರ್ಧೆ (ವೈಟ್ ಲಿಫ್ಟಿಂಗ್) ಯಲ್ಲಿ ಪಾಲ್ಗೊಂಡಿದ್ದ ಕೊಡಗಿನ ಯುವಕ ಎ. ಜಿ. ಮಧು 94ಕೆ. ಜಿ. ವಿಭಾಗದಲ್ಲಿ ಒಟ್ಟು 172.5 ಕೆ. ಜಿ. ಭಾರ ಎತ್ತುವ ಮೂಲಕ ದ್ವಿತೀಯ ಸ್ಥಾನ ಪಡೆದು ರಜತ ಪದಕ ಗೆದ್ದುಕೊಂಡಿದ್ದಾರೆ.

ಪುತ್ತೂರಿನ ಸಂತ ಫಿಲೋಮಿನಾ ಕಾಲೇಜಿನಲ್ಲಿ ದ್ವಿತೀಯ ಬಿ. ಎ. ಪದವಿ ವ್ಯಾಸಂಗ ಮಾಡುತ್ತಿದ್ದು, ಪುತ್ತೂರು ಯಂಗ್‌ಸ್ಟರ್ ಬಾರ್ಬೆಲ್ ಕ್ಲಬ್‌ನಲ್ಲಿ ಭಾರ ಎತ್ತುವ ತರಬೇತಿ ಪಡೆಯುತ್ತಿದ್ದಾರೆ. ಮಡಿಕೇರಿ ರೇಷ್ಮೆ ಇಲಾಖೆಯಲ್ಲಿ ಉದ್ಯೋಗಿಯಾಗಿರುವ ಅಂಚೆ ಮನೆ ಸಿ. ಗಣಪತಿ ಹಾಗೂ ಗುಣವತಿ ದಂಪತಿಯ ಪುತ್ರನಾಗಿರುವ ಮಧು 94ಕೆ. ಜಿ. ವಿಭಾಗದಲ್ಲಿ ಸ್ನ್ಯಾಚ್ - 90 +ಕ್ಲೀನ್ ಜರ್ಕ್‌ನಲ್ಲಿ 92.5 ಕೆ. ಜಿ. ಭಾರ ಎತ್ತಿ ಈ ಸಾಧನೆ ಮಾಡಿದ್ದಾರೆ.

- ಸಂಗಾತಿ

# ರಾಜ್ಯದ ರಾಜಧಾನಿಯಲ್ಲೊಂದು ಸಿಟಿ - ಆಸ್ಪತ್ರೆ




ರೋಗಗಳಿಂದ ಮುಕ್ತನಾದವನು ಇಂದು ಯಾರೂ ಇಲ್ಲ. ಮನುಷ್ಯ ಎಷ್ಟೆಲ್ಲಾ ಸಂಪಾದಿಸಿದ್ದರೂ, ಆರೋಗ್ಯ ಇಲ್ಲದಿದ್ದರೆ ಸಂಪಾದಿಸುವುದೆಲ್ಲವೂ ವ್ಯರ್ಥ. ರೋಗಗಳಿಂದ ಬಿಡುಗಡೆ ಯಾಗಬೇಕಾದರೆ, ಸದಾ ಆರೋಗ್ಯವಂತನಾಗಿರಬೇಕಾದರೆ ಇಂದು ವೈದಕೀಯ ರಂಗಕ್ಕೆ ಹೋಗಬೇಕಾದದ್ದು ಅನಿವಾರ್ಯ. ಆದರೆ ಇಂದು ಎಲ್ಲವೂ ಹಣಮಯ. ಆಸ್ಪತ್ರೆಯಿಂದ ಗುಣಮುಖವಾಗಿ ಹೊರಟ ರೋಗಿ ಕೌಂಟರಿನಲ್ಲಿ Bill ನೋಡಿ ಕುಸಿದು ಬಿದ್ದನಂತೆ! ಆ........ಮಾತೇ ಸಾಕು, ಇಂದು ಆಸ್ಪತ್ರೆಗಳು ಯಾವ ಮಟ್ಟದಲ್ಲಿ ಇವೆ ಎಂಬುದನ್ನು ತಿಳಿಯಲು. ಇನ್ನು ಕೆಲವು ಸರ್ಕಾರಿ ಆಸ್ಪತ್ರೆಗಳಲ್ಲಂತೂ ಹೇಳುವುದೇ ಬೇಡ.

ಇಂತಹ ಲೋಪದೋಷಗಳ ನಿವಾರಣೆಗಾಗಿ, ಆರೋಗ್ಯವೇ ಭಾಗ್ಯ ಎಂಬ ಧ್ಯೇಯವನ್ನು ಪಾಲಿಸಲು ಹೊರಟ ಬೆಂಗಳೂರಿನ ರಾಜಾಜಿನಗರದ 2 ನೇ ಹಂತದಲ್ಲಿ ಮೂರಂತಸ್ತಿನ ಕಟ್ಟಡದ ಸಿಟಿ ಆಸ್ಪತ್ರೆ (Hospital for Hospital)ಏಳು ಜನ ವೈದ್ಯರ ಸಂಯೋಗದಲ್ಲಿ ಸುಮಾರು ಮೂರುವರೆ ಕೋಟಿ ಬಂಡವಾಳವನ್ನು ಹಾಕಿ ಕಳೆದ ಆಗಸ್ಟ್ 25 ರಂದು ಉದ್ಘಾಟನೆಗೊಂಡಿತು.

ಆ ಆಸ್ಪತ್ರೆ ಆರಂಭವಾಗಲು ಮೂಲ ಕಾರಣ ಎಂದರೆ ಈ ಹಿಂದೆ ಗುಜರಾತಿನ ಗಲಭೆ ಪೀಡಿತ ಪ್ರದೇಶಕ್ಕೆ ಬೆಂಗಳೂರಿನಿಂದ 30 ಜನ ವೈದ್ಯರು ತೆರಳಿ ಸೇವೆ ಮಾಡಿದ್ದರು. ಇದೇ ರೀತಿ ನಮ್ಮ ರಾಜಧಾನಿಯಲ್ಲಿಯೆ ಏಕೆ ಸಂಯೋಗ ಆಸ್ಪತ್ರೆ ತರಬಾರದು ಎಂಬ ಮುಖ್ಯ ಯೋಜನೆ ಹಾಕಿಕೊಂಡು ಬೇರೆ-ಬೇರೆ ಆಸ್ಪತ್ರೆಗಳಲ್ಲಿ ಸುಮಾರು 20 ವರ್ಷಕ್ಕಿಂತ ಹೆಚ್ಚು ಸೇವೆ ಸಲ್ಲಿಸುತ್ತಿದ್ದ ವೈದ್ಯರುಗಳು ಸ್ವಯಂ ನಿವೃತ್ತಿ ಯೋಜನೆ ಅನ್ವಯ ಸಂಯೋಗ ವೈದ್ಯಕೀಯ ಆಸ್ಪತ್ರೆಯಲ್ಲಿ ಸೇವೆ ಸಲ್ಲಿಸಲು ಮುಂದಾದರು. ಈ ಆಸ್ಪತ್ರೆ ಹದಿನೈದು ತಿಂಗಳಲ್ಲೇ ನಿರ್ಮಾಣಗೊಂಡಿದ್ದು, ಇದಕ್ಕೆ ಈಗಾಗಲೇ 5 ದಾನಿಗಳು ಮುಂದೆ ಬಂದಿದ್ದೂ, ಇವರಿಟ್ಟ ಹಣದ ಆಧಾರದ ಮೇಲೆ ಬಡವರಿಗೆ ರಿಯಾಯಿತಿ ದರದಲ್ಲಿ ವೈದ್ಯಕೀಯ ಸೇವೆಯನ್ನು ನೀಡುವ ಸೌಲಭ್ಯವಿದೆ. ಈ ಆಸ್ಪತ್ರೆಯ ಆಡಳಿತ ಮಂಡಳಿಯಲ್ಲಿ ಮ್ಯಾನೆಜಿಂಗ್ ಡೈರೆಕ್ಟರಾಗಿ, ಡಾ|| ದೇವರಾಜ್ ಸಿ. ವಿ. ಸಿ. ಎಂ. ಬಿ. ಬಿ. ಎಸ್.ಇವರು ಡೈರೆಕ್ಟರ್ಸ್ ಹಾಗೂ ಪ್ರಮೋಟರಾಗಿ ಡಾ|| ಬೋಜಮ್ಮ ಎಂ. ಎನ್. ಎಂ. ಡಿ. ಡಿ. ಎನ್. ಬಿ., ಎಫ್. ಸಿ. ಐ. (ಫಿಷಿಸಿಯನ್); ಡಾ|| ನಾಗರಾಜಯ್ಯ, ಎಂ. ಬಿ. ಬಿ. ಎಸ್., (ಫ್ಯಾಮಿಲಿ ಫಿಷಿಸಿಯನ್), ಐಶ್ವರ್ಯ ನರ್ಸಿಂಗ್ ಸ್ಕೂಲ್ ನ ಅಧ್ಯಕ್ಷರು; ಡಾ|| ಸಚ್ಚಿದಾನಂದ M.D., DVD, DHA, ಡರ್ಮಟೋ ಸರ್ಜನ್, ಡಾ|| ಕಸ್ತೂರಿ ಎಸ್. ಎ. ಎಂ. ಡಿ. ಅನೆಸ್ತೇಸಿಯಾ ಲಾಜಿಸ್ಟ್; ಡಾ|| ಬಾಬು, ಬಿ. ಎಂ. ಎಸ್. ಎಂ. ಸಿ. ಎಚ್, ಪ್ಲಾಸ್ಟಿಕ್ ಸರ್ಜನ್; ಡಾ|| ಜಲಜಾಕ್ಷಿ ಬಿ. ಎಂ. ಡಿ, ಡಿ. ಎನ್. ಬಿ. (ಅಬ್‌ಸ್ಟೆಷಿಯನ್ ಮತ್ತು ಗೈನಕಾಲಾಜಿಸ್ಟ್); ಶ್ರೀಬಸವರಾಜ್ ಆರ್; ಡಾ|| ಕಸ್ತೂರಿ. ಎಸ್. ಕೆ.; ಡಾ|| ವಿಜಯ ಕುಮಾರ್ ಹಾಗೂ ಡಾ|| ಲಕ್ಷ್ಮಿ. ಬಿ.ಜೆ. ಇವರುಗಳು ಇರುತ್ತಾರೆ. ಇವರಲ್ಲಿ ಡಾ|| ಬೋಜಮ್ಮ ಎಂ. ಎನ್. ಮತ್ತು ಡಾ|| ಲಕ್ಷ್ಮಿಯವರು ಬೈತಡ್ಕ ಜೋಯಪ್ಪ DYSPಇವರ ಪತ್ನಿ ಮತ್ತು ಪುತ್ರಿಯಾಗಿರುವುದು ನಿಜಕ್ಕೂ ಪ್ರಶಂಸನಿಯ.

ಸಮಾರಂಭದ ಉದ್ಘಾಟನೆಯನ್ನು, ತುಮಕೂರಿನ ಸಿದ್ಧಗಂಗಾ ಕ್ಷೇತ್ರದ ಅಧ್ಯಕ್ಷರಾದ ಡಾ|| ಶ್ರೀ..... ಶ್ರೀ..ಶಿವಕುಮಾರರ ದಿವ್ಯ ಸಾನಿಧ್ಯದಲ್ಲಿ, ಅಲ್ಲಿನ ಕಿರಿಯ ಶ್ರೀಗಳಾದ ಸಿದ್ಧಗಂಗಾ ಮಹಾಸ್ವಾಮಿಗಳು ನೆರವೇರಿಸಿದರು. ಅಧ್ಯಕ್ಷರಾಗಿ ಕನಕ ಪುರದ ಶ್ರೀ ದೇಗುಲ ಮಠದ ಅಧ್ಯಕ್ಷರಾದ ಪರಮ ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ ಮಹಾ ಸ್ವಾಮಿಗಳು, ಮುಖ್ಯ ಅತಿಥಿಗಳಾಗಿ ಡಾ|| ಎ. ಬಿ. ಮೂಲಕ ರೆಡ್ಡಿ (ವೈದ್ಯಕೀಯ ಶಿಕ್ಷಣ ಸಚಿವರು) ಶ್ರೀ ಬಾಬುರಾವ್ ಚೌಹಾನ್ (ವಯಸ್ಕರ ಶಿಕ್ಷಣ ಸಚಿವರು)ಶ್ರೀ ಕೆ. ಎಲ್. ಮಂಜುನಾಥ್, (ನ್ಯಾಯಾಧೀಶರು ಹೈ ಕೋರ್ಟ್)ಶ್ರೀ ಸಿ. ಸೋಮಶೇಖರ್ (ಕೆ. ಎ. ಎಸ್.ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ) ಇವರುಗಳು ಭಾಗವಹಿಸಿದ್ದರು.

-ಮೂಡಗದ್ದೆ ಕೃಪಾ.

---

ಪ್ರಬಲ ಇಚ್ಛಾಶಕ್ತಿ, ಕಠಿಣ ಪರಿಶ್ರಮ, ಸದೃಢ ಮನೋಭಾವದ ಏಕಾಗ್ರತೆಯಿಂದ ಮಾತ್ರ ಹೆಚ್ಚಿನ ಪ್ರತಿಫಲ ಸಾಧ್ಯ.

- ಸಂಗಾತಿ.

## V ಶರ್ಪ ಒಕ್ಕಲಿಗರು

ಇವರನ್ನು ಸಲಹುವ ಒಕ್ಕಲಿಗರೆಂದೂ ಕರೆಯುತ್ತಾರೆ. ಶರ್ಪ ಎಂಬ ಪದವು ಪ್ರಾಕೃತ ಭಾಷೆಯಿಂದ ಬಂದದ್ದು. ಇವರು ಕಸುಬಿನಲ್ಲಿ ಕಬ್ಬಿಣ ಕೆಲಸ ಮಾಡುವವರು. ಇವರು ಹೆಚ್ಚು ತುಮಕೂರಿನ ಶಿರ, ಚಿಕ್ಕ ನಾಯನಹಳ್ಳಿ, ಗುಬ್ಬಿ ಪಾವಗಡ ಅರಸೀಕೆರೆ, ಚಿಕ್ಕಮಂಗಳೂರು ತರೀಕೆರೆ, ಶಿವಮೊಗ್ಗ, ಕೋಲಾರ ಪ್ರದೇಶಗಳಲ್ಲಿ ನೆಲಸಿದ್ದಾರೆ. ಇವರಲ್ಲಿ ಲಿಂಗಾಯುತರೂ ಮತ್ತು ಲಿಂಗಾಯಿತರಲ್ಲದ ಎರಡು ಪಂಗಡಗಳಿವೆ. ಒಕ್ಕಲಿಗರಲ್ಲಿ 2 ಉಪಜಾತಿಗಳಿವೆ. ಇವರಿಗೆ 33ಗೋತ್ರಗಳಿವೆ. ಇವರ ಜಾತಿ ಜಗಳಗಳನ್ನು ಕಟ್ಟೆಮನೆ ಮುಖ್ಯಸ್ಥರ ಮುಖಾಂತರ ತೀರಿಸಿಕೊಳ್ಳುತ್ತಾರೆ. ಲಿಂಗಾಯಿತರಲ್ಲದ ಶರಥ ವಿಷ್ಣುವನ್ನು ಆರಾಧಿಸುತ್ತಾರೆ. ಇವರು ಮಾರ ಮಾರಮ್ಮನನ್ನು ಪೂಜಿಸುತ್ತಾರೆ.

### ಪದ್ಧತಿಗಳ ವ್ಯತ್ಯಾಸ

| | ಗೌಡರು | ಶರ್ಪ ಒಕ್ಕಲಿಗರು |
|---|---|---|
| ಭಾಷೆ | ಇವರು ಅರೆ ಗನ್ನಡ ಭಾಷೆ ಮತ್ತು ತುಳು ಮಾತನ್ನಾಡುತ್ತಾರೆ. | ಇವರು ಕನ್ನಡ ಭಾಷೆಯನ್ನು ಮಾತನಾಡುತ್ತಾರೆ. |
| ಗೋತ್ರ | 18 ಗೋತ್ರಗಳಿವೆ. | 33 ಗೋತ್ರಗಳಿವೆ. |
| ಆರಾಧನೆ | ಇವರು ವೆಂಕಟರಮಣನನ್ನು ಮನೆ ದೇವರಾಗಿ ಆರಾಧಿಸುತ್ತಾರೆ. | ಇವರು ವಿಷ್ಣು, ಮಾರಮ್ಮ ದೇವರನ್ನು ಪೂಜಿಸುತ್ತಾರೆ. |
| ಶವ ಸಂಸ್ಕಾರ | ಇವರು ಸತ್ತವರನ್ನು ಸುಡುತ್ತಾರೆ. | ಇವರು ಸತ್ತವರನ್ನು ಹೂಳುತ್ತಾರೆ. |

## VI ಕುಂಚಟಿಗರು

ಕುಂಚಟಿಗರು ಶಿವಮೊಗ್ಗ, ತುಮಕೂರು, ಚಿತ್ರದುರ್ಗ, ಬೆಂಗಳೂರು ಜಿಲ್ಲೆಗಳಲ್ಲಿ ನೆಲಸಿದ್ದಾರೆ. ಇವರು ಮೊದಲು ದೆಹಲಿ ಹತ್ತಿರದ ಊರಿನಲ್ಲಿ ನೆಲಸಿ ಈಗಿರುವ ಸ್ಥಳಗಳಲ್ಲಿ ಬಂದು ನೆಲಸಿದರು.
ಇವರಿಗೆ 48 ಗೋತ್ರಗಳಿವೆ. ಇವರಲ್ಲಿ ಶಿವನನ್ನು ಮತ್ತು ವಿಷ್ಣುವನ್ನು ಪೂಜಿಸುತ್ತಾರೆ. ಶಿವನನ್ನು ಪೂಜಿಸುವವರಿಗೆ ಮಲ್ಲಜನ ಎನ್ನುತ್ತಾರೆ. ವಿಷ್ಣುವನ್ನು ಪೂಜಿಸುವವರನ್ನು ವಾಸು ದೇವಪಂಗಡದವರೆಂದು ಕರೆಯುತ್ತಾರೆ. ಇವರು ಲಕ್ಷ್ಮಿಯನ್ನು ಪೂಜಿಸುತ್ತಾರೆ. ಕುಂಚ-ಡಿಗರಲ್ಲಿ ಲಿಂಗಾಯಿತರೂ ಇದ್ದಾರೆ. ಇವರು ಬಿಲ್ವ, ಆಲದ ಮರ, ತುಳಸಿಯನ್ನು ಪೂಜಿಸುತ್ತಾರೆ. ಇವರು ಸತ್ತವರನ್ನು ಹೂಳುತ್ತಾರೆ.

### ಪದ್ಧತಿಗಳ ವ್ಯತ್ಯಾಸ

| | ಗೌಡರ ಪದ್ಧತಿ | ಕುಂಚಟಿಗರ ಪದ್ಧತಿ |
|---|---|---|
| ಭಾಷೆ | ಇವರು ಅರೆಗನ್ನಡ ಭಾಷೆ ಮತ್ತು ತುಳು ಮಾತನ್ನಾಡುತ್ತಾರೆ. | ಇವರು ಕನ್ನಡ ಭಾಷೆಯನ್ನು ಮಾತನಾಡುತ್ತಾರೆ. |
| ಗೋತ್ರ | 18 ಗೋತ್ರಗಳಿವೆ. | 48 ಗೋತ್ರಗಳಿವೆ. |
| ಉಪಜಾತಿ | ಇಲ್ಲ | ಮಲ್ಲಜನ, ಲಿಂಗಾಯಿತಿಯರು, ವಾಸುದೇವ ಪಂಗಡ, ವೈಷ್ಣವರು |
| ಆರಾಧನೆ | ಇವರು ವೆಂಕಟರಮಣನನ್ನು ಮನೆ ದೇವರಾಗಿ ಆರಾಧಿಸುತ್ತಾರೆ. | ಶಿವ, ವಿಷ್ಣು, ಲಕ್ಷ್ಮಿ, ಬಿಲ್ವಮರ, ಆಲದ ಮರ, ತುಳಸಿಯನ್ನು ಪೂಜಿಸುತ್ತಾರೆ. |
| ಶವ ಸಂಸ್ಕಾರ | ಇವರು ಸತ್ತವರನ್ನು ಸುಡುತ್ತಾರೆ. | ಇವರು ಸತ್ತವರನ್ನು ಹೂಳುತ್ತಾರೆ. |

## VII ಸದರು ಒಕ್ಕಲಿಗರು

ಇವರಲ್ಲಿ ಕೆಲವರು ಲಿಂಗಾಯಿತರಾಗಿ ಪರಿವರ್ತಿಸಿ ಲಿಂಗಾಯಿತದ ಸದರು ಮತ್ತು ಲಿಂಗಾಯಿತರಲ್ಲದ ಸದರು ಎರಡು ಪಂಗಡದವರಿದ್ದಾರೆ. ಲಿಂಗಾಯಿತರಲ್ಲದ ಸದರು ಒಕ್ಕಲಿಗರಲ್ಲ ಹಾವಿನವರು ಮತ್ತು ಹೊಂಗೆಯವರು ಎಂಬ ಎರಡು ಉಪಜಾತಿಗಳಿವೆ. ಇವರಿಗೆ 33 ಗೋತ್ರಗಳಿವೆ. ಇವರಲ್ಲಿ ಜಾತಿ ಜಗಳಗಳನ್ನು ಕಟ್ಟೆ ಮನೆಯವರ ಮುಖಾಂತರ ತೀರಿಸಿಕೊಳ್ಳುತ್ತಾರೆ. ಲಿಂಗಾಯಿತರಲ್ಲದ ಸದರ ಒಕ್ಕಲಿಗರು ವೈಷ್ಣವರು. ಈಗ ಕೆಲವರು ಜೈನರ ರೀತಿಯಲ್ಲಿ ಪೂಜಿಸುತ್ತಾರೆ. ಇವರು ಜೈನ ತೀರ್ಥಂಕರಿಗೆ ಹೆಚ್ಚಿನ ಗೌರವ ಕೊಡುತ್ತಾರೆ. ಇದಲ್ಲದೆ ಗ್ರಾಮದೇವತೆಗಳಾದ ಮಾರಮ್ಮ ದೇವತೆಗಳನ್ನು ಪೂಜಿಸುತ್ತಾರೆ. ಸದರ ಒಕ್ಕಲಿಗರು ಸತ್ತವರನ್ನು ಹೂಳುತ್ತಾರೆ.

## ಪದ್ಧತಿಗಳ ವ್ಯತ್ಯಾಸ

| | ಗೌಡರು | ಪದರು ಒಕ್ಕಲಿಗರು |
|---|---|---|
| ಭಾಷೆ | ಇವರು ಅರೆಗನ್ನಡ ಭಾಷೆ ಮತ್ತು ತುಳು ಮಾತನ್ನಾಡುತ್ತಾರೆ. | ಇವರು ಕನ್ನಡ ಭಾಷೆಯನ್ನು ಮಾತನಾಡುತ್ತಾರೆ. |
| ಗೋತ್ರ | 18 ಗೋತ್ರಗಳಿವೆ. | 33 ಗೋತ್ರಗಳಿವೆ. |
| ಉಪಜಾತಿ | ಇಲ್ಲ | ಲಿಂಗಾಯಿತರು, ಜೈನರು, ಲಿಂಗಾಯಿತರಲ್ಲದ ವೈಷ್ಣವರು. |
| ಆರಾಧನೆ | ಇವರು ವೆಂಕಟರಮಣನನ್ನು ಮನೆ ದೇವರಾಗಿ ಆರಾಧಿಸುತ್ತಾರೆ. | ವಿಷ್ಣು, ಗ್ರಾಮ ದೇವತೆ ಮಾರಮ್ಮರನ್ನು ಪೂಜಿಸುತ್ತಾರೆ. ಜೈನ ತೀರ್ಥಂಕರನ್ನು ಪೂಜಿಸುತ್ತಾರೆ. |
| ಶವ ಸಂಸ್ಕಾರ | ಇವರು ಸತ್ತವರನ್ನು ಸುಡುತ್ತಾರೆ. | ಇವರು ಸತ್ತವರನ್ನು ಹೂಳುತ್ತಾರೆ. ಲೇ. ಪ್ರೊ|| ಪೂಜಾರಿ ಪೊಣ್ಣಪ್ಪ. |

## ಕೊಡವ ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಸ್ಥಾನಕ್ಕೆ ಅಪ್ಪಣ್ಣ ರಾಜಿನಾಮೆ.



ಕೊಡವ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷ ಬಾಚರಣಿಯಂಡ ಅಪ್ಪಣ್ಣ ಅವರು ತಮ್ಮ ಸ್ಥಾನಕ್ಕೆ 11-9-02 ರಂದು ರಾಜೀನಾಮೆ ನೀಡಿದ್ದಾರೆ. ಅನಾರೋಗ್ಯದ ಕಾರಣ ಕೆಲಸ ನಿರ್ವಹಿಸಲು ಕಷ್ಟಕರವಾಗಿರುವ ಹಿನ್ನಲೆಯಲ್ಲಿ ತಮ್ಮ ಸ್ಥಾನಕ್ಕೆ ರಾಜೀನಾಮೆ ನೀಡುತ್ತಿರುವದಾಗಿ ಅಪ್ಪಣ್ಣ ಅವರು ರಾಜ್ಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ರಾಣಿ ಸತೀಶ್ ಹಾಗೂ ಜಿಲ್ಲಾ ಉಸ್ತುವಾರಿ ಸಚಿವ ಎಂ. ಎಂ. ನಾಣಯ್ಯ ಅವರಿಗೆ ಸಲ್ಲಿಸಿರುವ ರಾಜೀನಾಮೆ ಪತ್ರದಲ್ಲಿ ಉಲ್ಲೇಖಿಸಿದ್ದಾರೆ. ಈ ಕುರಿತು ಮಾತನಾಡುತ್ತಿದ್ದ ಬಾಚರಣಿಯಂಡ ಅಪ್ಪಣ್ಣ ಅವರು, ಕಳೆದ ಕೆಲವು ದಿನಗಳಿಂದ ತಾನು ತೀವ್ರ ರೀತಿಯಲ್ಲಿ ಅನಾರೋಗ್ಯಕ್ಕೀಡಾಗಿದ್ದೇನೆ. ಹೆಚ್ಚಿನ ರಕ್ತದ ಒತ್ತಡ, ದೃಷ್ಟಿದೋಷದಿಂದಾಗಿ ಬಳಸುತ್ತಿದ್ದೇನೆ. ಈ ಬಗ್ಗೆ ವೈದ್ಯರು ಪರೀಕ್ಷಿಸಿ ವಿಶ್ರಾಂತಿ ತೆಗೆದುಕೊಳ್ಳುವಂತೆ ಸಲಹೆ ನೀಡಿದ ಮೇರೆಗೆ ತನ್ನ ಸ್ಥಾನಕ್ಕೆ ರಾಜೀನಾಮೆ ನೀಡುವ ನಿರ್ಧಾರಕ್ಕೆ ಬಂದಿದ್ದೇನೆ. ಯಾವುದೇ ರಾಜಕೀಯ ಒತ್ತಡದಿಂದಾಗಲಿ ಅಥವಾ ಇನ್ನಿತರ ಕಾರಣಗಳಿಂದ ತಾನು ರಾಜಿನಾಮೆ ನೀಡಿಲ್ಲ ಎಂದು ಸ್ಪಷ್ಟ ಪಡಿಸಿದ ಅಪ್ಪಣ್ಣ ಅವರು, ಕಳೆದ 14 ತಿಂಗಳಿನಿಂದ ಅಧ್ಯಕ್ಷನಾಗಿ ಕಾರ್ಯನಿರ್ವಹಿಸಿದ್ದೇನೆ. ಈ ಅವಧಿ ತನಗೆ ತೃಪ್ತಿ ತಂದಿದೆ. ಆದರೆ ಇನ್ನಷ್ಟು ಕೆಲಸ ಮಾಡಲಾಗದಿರುವದಕ್ಕೆ ನೋವು ತಂದಿದೆ ಎಂದು ನುಡಿದರು.

ತನ್ನ ಅಧಿಕಾರಾವಧಿಯಲ್ಲಿ ಅನೇಕ ಮಕ್ಕಳಿಗೆ ಹಾಗೂ ಯುವ ಜನಾಂಗಕ್ಕೆ ಕೊಡವ ಸಂಸ್ಕೃತಿ ಕುರಿತು ತರಬೇತಿಗಳನ್ನು ನೀಡಲಾಗಿದೆ. ಹಲವಾರು ಕಡೆ ಕೊಡವ ಮೇಳ ನಡೆಸಲಾಗಿದೆ. ಸಾಹಿತ್ಯಿಕ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿದೆ. ಅನೇಕ ಪುಸ್ತಕಗಳನ್ನು ಪ್ರಕಟಿಸಲಾಗಿತ್ತು ಎಂದು ಅಪ್ಪಣ್ಣ ವಿವರಿಸಿದ್ದಾರೆ. ತನ್ನ ಅಧಿಕಾರಾವಧಿಯಲ್ಲಿ ಸಹಕರಿಸಿದ ಪ್ರತಿಯೊಬ್ಬರಿಗೂ ತಾನು ಆಭಾರಿಯಾಗಿದ್ದೇನೆ ಎಂದು ಹೇಳಿದರು. ಕೊಡಗು ಸಂಗಾತಿಯ ಹಿರಿಯ ಬರಹಗಾರರಾಗಿದ್ದ ಶ್ರೀ ಬಾಚರಣಿಯಂಡ ಅಪ್ಪಣ್ಣನವರ ಆರೋಗ್ಯ ಆದಷ್ಟು ಬೇಗ ಸುಧಾರಿಸಲಿ ಎಂದು ಹಾರೈಸೋಣ.

-ಸಂಗಾತಿ.



# ಕೊಡಗಿನ ಬ್ರಹ್ಮಗಿರಿಯ ಮಡಿಲಲ್ಲಿ ಅಕ್ಟೋಬರ್ 17 ರ ಮಧ್ಯರಾತ್ರಿಯಂದು ಜಗನ್ಮಾತೆ ಆದಿಶ್ರೀ ಕಾವೇರಿಯ ತೀರ್ಥೋದ್ಭವ



ಕೊಡಗಿನ ಬ್ರಹ್ಮಗಿರಿಯ ಮಡಿಲಲ್ಲಿ ಅಕ್ಟೋಬರ್ 17 ರ ಮಧ್ಯರಾತ್ರಿಯಂದು ಜಗನ್ಮಾತೆ ಆದಿ ಶ್ರೀ ಕಾವೇರಿಯ ತೀರ್ಥೋದ್ಭವವಾಗಲಿದೆ.

ಕೊಡಗಿನ ಬ್ರಹ್ಮಗಿರಿಯ ತಲಕಾವೇರಿಯ ಮಡಿಲಲ್ಲಿ ಅಕ್ಟೋಬರ್ 18 ರ ಬೆಳಗಿನ ಜಾವ 1-21 ಕ್ಕೆ ಸರಿಯಾಗಿ ತುಲಾ ಲಗ್ನದಲ್ಲಿ ಪವಿತ್ರ ಮಾತೆಯು, ದೇಶೋದ್ಧಾರಕಳು, ಕವೇರಿಮುನಿ ದಂಪತಿಗಳ ದತ್ತು ಪುತ್ರಿಯೂ ಆದ ಲೋಪ ಮುದ್ರೆ, ಜಗನ್ಮಾತೆ ಶ್ರೀ ಕಾವೇರಿ ತಾಯಿಯು, ದಕ್ಷಿಣಾಚಲದಿಂದ ವರ್ಷಪ್ರತಿ ಸುಮಾರು ಎರಡು ಲಕ್ಷಕ್ಕೂ ಮಿಕ್ಕಿ ಸ್ತ್ರೀ ಪುರುಷ, ಮಕ್ಕಳಾದಿಯಾಗಿ ಆಗಮಿಸುವ ಭಕ್ತ ವೃಂದಕ್ಕೆ ತೀರ್ಥ ಸ್ವರೂಪಿಣಿಯಾಗಿ ಕಾಣಿಸಿಕೊಳ್ಳಲಿದ್ದಾಳೆ.

ತುಲಾ ಸಂಕ್ರಮಣದಂದು ಕಾವೇರಿ ತಾಯಿಯು ದಕ್ಷಿಣಾಚಲದ ಕಾವೇರಿ ಬಯಲಿನ ಕೋಟಿ ಭಕ್ತ ವೃಂಧವನ್ನು ಆಹ್ವಾನಿಸಿ, ತಾನು ಪೂಜಿಸಲ್ಪಡುವುದು ವಾಡಿಕೆ. ಕೊಡಗಿನ ಜನತೆ ಅದರಲ್ಲೂ ಹೆಚ್ಚಿನ ಸಂಖ್ಯೆಯಲ್ಲಿ ಶ್ರೀ ಕಾವೇರಿ ಸನ್ನಿಧಿಯಲ್ಲಿ ವಾಸವಾಗಿ ನೆಲೆ ನಿಂತಿರುವ ಪ್ರತಿರ್ಯೋವರು ಮಡಿ ಭಕ್ತಿಯಲ್ಲಿ ತಾಯಿಯನ್ನು ಪೂಜೆಗೈಯ್ಯುವುದರಿಂದ ತಮ್ಮ ಇಷ್ಟಾರ್ಥ ಸಿದ್ಧಿಸುವುದರಲ್ಲಿ ಯಾವುದೇ ಅನುಮಾನವಿಲ್ಲವೆನ್ನುವುದು ಸಹ ಪುರಾಣ ಪ್ರಸಿದ್ಧವಾಗಿದೆ. ಹಾಗೆಯೇ ಜೀವನದಲ್ಲಿ ಒಮ್ಮೆ ನವ ದಂಪತಿಗಳಾಗಿ ಭೇಟಿ ಕೊಟ್ಟು, ತಾಯಿಯ ಕೃಪೆಗೆ ಪಾತ್ರರಾಗುವುದು ಸಹ ಅಮೂಲ್ಯವಾಗಿದೆ.

***ಕಾವೇರಿಯ ಕಿರುಪರಿಚಯ :***

ಕಾವೇರಿಯ ಉಗಮ ಸ್ಥಾನದ ಕುಂಡಿಕೆಯಲ್ಲಿ ಸೂರ್ಯದೇವನು ತುಲಾ ರಾಶಿಗೆ ಪ್ರವೇಶಿಸುವ ಪುಣ್ಯ ಕಾಲದಲ್ಲಿ ಕಾವೇರಿ ಮತ್ತು ಗಂಗೆಯರ ಸಮಾಗಮವೇ ಈ ತೀರ್ಥೋದ್ಭವ ದಿನ. ಈ ತೀರ್ಥೋಧ್ಭವ ದಿನ ಸೂರ್ಯನು ತುಲಾರಾಶಿಯನ್ನು ಪ್ರವೇಶಿಸುವ ಸಮಯದಲ್ಲಿ, ಕುಂಡಿಕಾ ತೀರ್ಥಸ್ಥಾನವನ್ನು ವಿದ್ಯುಕ್ತವಾಗಿ ಮಾಡುವುದರಿಂದ ಅಶ್ವಮೇಧದ ಫಲವೂ, ಸರ್ವಪಾಪ ಪುಂಜ ಪರಿಹರಿಸುವಿಕೆಯೂ, ಮನುಜ ಕುಲವು ಗಂಗಾ ಯಮುನಾ ಸಂಗಮದಲ್ಲಿ ಹೊಂದುವ ಫಲಕ್ಕಿಂತ ಕೋಟಿ ಪಾಲು ಸಿಗುವುದೆಂದು ಮತ್ತು ಪಾಪಮುಕ್ತರನ್ನಾಗಿಯೂ, ಮೋಕ್ಷಕ್ಕೆಡೆ ಮಾಡಿಕೊಡುವುದೆಂದು, ಸರ್ವಸನ್ಮಂಗಳವನ್ನುಂಟು ಮಾಡುತ್ತಾಳೆಂಬ ಗಾಢ ನಂಬಿಕೆ ಸರ್ವ ಶ್ರೇಷ್ಟವಾಗಿರುತ್ತದೆ.

ವಿಷ್ಣುವಿನಿಂದ ಅವತರಿಸಿ, ಲಕ್ಷ್ಮಿದೇವಿಯ ಅಂಶದಿಂದ ಹುಟ್ಟಿದವಳಾಗಿ ಸೃಷ್ಟಿಕರ್ತ ಚತುರ್ಮುಖ ಬ್ರಹ್ಮನ ದತ್ತು ಪುತ್ರಿಯಾಗಿ ತ್ರಿಲೋಕ ಸುಂದರಿಯೂ ಆದವಳು, ತನ್ನ ಅಪ್ರತಿಮ ಸೌಂದರ್ಯಕ್ಕೆ ತನಗೆ ತಾನೇ ಅಸೂಯೆ ಪಟ್ಟುಕೊಳ್ಳುತ್ತಾ, ಕಿಶೋರಿ ಲೋಪಾ ಮುದ್ರೆಯು ಬೆಳೆಯುತ್ತಾಳೆ. ಇಂದಿಗೂ ಕಾವೇರಿ ಮೂರ್ತಿ ಬಹಳ ಕಮ್ಮಿಯೇ ಸರಿ. ಅವಳ ಚೆಲುವ ಭವ್ಯ ಮೂರ್ತಿ ಇಂದು ಎಲ್ಲೂ ಇಲ್ಲವಾಗಿದೆ. ಸುಂದರಿ ಕಾವೇರಿಯಂತೆಯೇ ಕೊಡಗಿನ ವನಿತೆಯರು ಸಹ ಚೆಲುವೆಯರಾಗಿರುವುದೊಂದು ವಿಶೇಷವಾಗಿದೆ.

ಬ್ರಹ್ಮಾಂಡ ಬ್ರಹ್ಮಗಿರಿ ತಪ್ಪಲಿನಲ್ಲಿ ಕವೇರ ಮುನಿದಂಪತಿಗಳು ಸಂತಾನ ಭಾಗ್ಯಕ್ಕಾಗಿ ಕಠೋರ ತಪಸ್ಸನ್ನು ಆಚರಿಸುತ್ತಿರಲು, ಇವರ ಪರಮ ಭಕ್ತಿಗೆ ಮೆಚ್ಚಿದ ಪರಬ್ರಹ್ಮನು ತನ್ನ ದತ್ತು ಪುತ್ರಿಯಾದ ಲೋಪಾಮುದ್ರೆಯನ್ನು ಲೋಕ ಕಲ್ಯಾಣಕಾರಿಣಿಯಾಗೆಂದು ಹರಸಿ ಅನುಗ್ರಹಿಸುತ್ತಾಳೆ. ಅಂದಿನಿಂದ ಕವೇರ ಮುನಿಯ ಮಗಳಾಗಿ 'ಕಾವೇರಿ'ಯಾಗುತ್ತಾಳೆ. ದಿನಗಳು ಉರುಳುತ್ತಾ ಇರಲು ಸುಂದರ ಮಗಳ ಲಾಲನೆ, ಪಾಲನೆಯಲ್ಲಿರಲು, ಈ ಮುನಿ ದಂಪತಿಗಳು ದೇಹತ್ಯಾಗ ಮಾಡಿ ಮುಕ್ತಿಯನ್ನು ಹೊಂದುತ್ತಾರೆ.

ಅಂತೆಯೇ ಅನಾಥೆಯಾದ ಕಾವೇರಿ, ಋಷಿಮುನಿಗಳ ಸೇವೆಯನ್ನು ಮಾಡುತ್ತಾ ಆಶ್ರಮವಾಸಿಯಾಗುತ್ತಾಳೆ. ಲೋಕ ಸಂಚಾರಾರ್ಥವಾಗಿ ಆಗಮಿಸಿದ ಅಗಸ್ತ್ಯ ಋಷಿಗಳ ಇಚ್ಛೆಗೆ ಒಲಿದು ಜೀವನ ಪರ್ಯಂತ ತನ್ನನ್ನು ಒಂದು ಕ್ಷಣವೂ ಬಿಟ್ಟಿರದೆ ತನ್ನೊಡನೆಯೇ ಬಾಳಬೇಕೆನ್ನುವ ವಚನವನ್ನು ಪಡೆದು ಮಹಾ ತಪಸ್ವಿಗಳ ಸಹಧರ್ಮಿಣಿಯಾಗುತ್ತಾಳೆ ಕಾವೇರಿ.

ಹೀಗಿರಲು ಒಮ್ಮೆ, ಅಗಸ್ತ್ಯರು ತನ್ನ ಪತ್ನಿ ಕಾವೇರಿಯನ್ನು ಜಲ ರೂಪವಾಗಿ ಪರಿವರ್ತಿಸಿ, ಅದನ್ನು ತನ್ನ ಕಮಂಡಲದಲ್ಲಿರಿಸಿ, ಪಕ್ಕದ ಕನ್ನಿಕೆಯ ಬಳಿ ಸ್ನಾನಕ್ಕೆಂದು ತೆರಳುತ್ತಾರೆ. ತನ್ನಪತಿಯ ವಚನಭಂಗಕ್ಕೆ ಅಸಂತುಷ್ಟಳಾದ ಪರಮ ಸುಂದರೆ ಕಾವೇರಿ ತನ್ನ ಪಿತೃವಿನ ಇಚ್ಛೇಯಂತೆ ಜೀವಕೋಟಿಯ ಉದ್ಧಾರಕ್ಕಾಗಿ, ಶಾಶ್ವತ ಜಲರೂಪವನ್ನು ತಳೆದು, ನದಿಯಾಗಿ ಹರಿದು, ತನ್ನ ಸಂಗಾತಿಯರಾದ ಕನ್ನಿಕೆ ಮತ್ತು ಸುಜ್ಯೋತಿಯವರೊಡಗೂಡಿ ಮೇಘ ಪರ್ವತದಿಂದ ಇಳಿದು, ಹಸಿರಿನ ಚೆಲುವೆಯಾಗಿ, ಪವನ ಶಕ್ತಿಯ ಅಮೋಘ ಧಾರೆಯಾಗಿ, ತನ್ನ ಪ್ರತಿಯೊಂದು ಕ್ಷಣದ ಬಿಂದುವನ್ನು ಕೋಟಿ ಕೋಟಿ ಜೀವರಾಶಿಗಳ ಪಾಲಿಗೆ ಚೈತನ್ಯ ಮಯವಾಗಿರಿಸುತ್ತಾ, ಸದಾ ಸದ್ಭಾವನೆ ಪರೋಪಕಾರಿಣಿಯಾಗಿ, ಅಂದಿನಿಂದ ಈ ಧರೆಯೊಳಗೆ ನಿರಂತರವಾಗಿ ಹರಿಯತೊಡಗಿದಳು, ಪರಮ ಪಾವನೆಯು ಲೋಕೋದ್ಧಾರಕಳೂ ಆದ ಮಾತೆ ಶ್ರೀ ಕಾವೇರಿ.

ಕಾವೇರಿ ಮೊದಲು ಬ್ರಹ್ಮಗಿರಿಯ ಕುಂಡಿಕೆ, ತಲಕಾವೇರಿ ನಾಗತೀರ್ಥ ಕ್ಷೇತ್ರ, ಭಗಂಡ ಕ್ಷೇತ್ರ, ಭಾಗಮಂಡಲದ ತ್ರಿವೇಣಿ ಸಂಗಮ, ಹರಿಶ್ಚಂದ್ರ, ಬಲಮುರಿ, ಗುಹ್ಯ, ರಾಮಸ್ವಾಮಿ ಕಣಿವೆ. ರಾಮನಾಥಪುರ, ಸಾಲಿಗ್ರಾಮ, ಚುಂಚನಕಟ್ಟೆ, ಕಪ್ಪಡಿ ಕ್ಷೇತ್ರ, ಎಡತೊರೆ, ಎರಡನೇ ಬಲಮುರಿ, ಶ್ರೀನಿವಾಸ ಕ್ಷೇತ್ರ, ರಂಗನತಿಟ್ಟು ಪಶ್ಚಿಮವಾಹಿನಿ, ಶ್ರೀರಂಗಪಟ್ಟಣ, ಕರಿಘಟ್ಟ, ಮಹದೇವಪುರ, ಸೋಮನಾಥಪುರ, ತಿರುಮಕೂಡಲು ನರಸೀಪುರ, ಮುಡಕತೊರೆ, ತಲಕಾಡು, ಸತ್ಯಗಾಲ, ಗವಿರಾಯಬೆಟ್ಟ, ಶಿವನಸಮುದ್ರ, ಸಂಗಮ, ಮೇಕೆದಾಟು, ಹೊಗೆನಕಲ್, ಇತ್ಯಾದಿಯಾಗಿ ಕರ್ನಾಟಕದಲ್ಲಿಯೂ ಮತ್ತು ಉಂಜಲೂರು, ಕೊಡುಮುಡಿ ನಿರೂರು, ತಿರುಮಕೂಡಲು, ಕಟ್ಟಳೈ, ರಾಮಸಮುದ್ರಮ್, ಸತ್ಯಮ್ ತಿರುನಾರಾಯಣಪುರಮ್, ತಿರುಈಂಗೋಮಲ್ಯೆ, ಕರುಪತ್ತೂರು, ಕುಳಿತಲ್ಯೆ, ತಿರುಪ್ಪರ್ಯಾತುರ್ಯೆ, ಮುಕ್ಕುಂ, ಶ್ರೀರಂಗಂ, ತಿರುವಾನೈಕ್ಕವಲ್, ತಿರುಚಿನಪಳ್ಳಿ, ಕೃಷ್ಣರಾಯಪುರಂ, ಕಲ್ಲಣೆ, ತಿರುವೈಯಾರ್, ತಂಜಾವೂರ್, ಪಾಪನಾಶನಮ್, ಸ್ವಾಮಿಮಲ್ಯೆ, ಗೋವಿಂದಪುರ, ಧರ್ಮಾಪುರಮ್, ಛಾಯಾವನಮ್ ಪೊಂಪುಹಾರ್, ಹೀಗೆ ತಮಿಳುನಾಡಿನಲ್ಲಿಯೂ ಹರಿದು ಎಲ್ಲಾ ಕ್ಷೇತ್ರಗಳನ್ನು ಪಾವನವನ್ನಾಗಿಸಿ, ಕೋಟ್ಯಾಂತರ ಭಕ್ತ ವೃಂದದವರನ್ನು ತನ್ನ ಮಡಿಲಲ್ಲಿ ಪಡೆದು, ಅಲ್ಲಲ್ಲಿ ತನ್ನ ಹರಿವಿನ ಗಾತ್ರ ಪಾತ್ರವನ್ನು ವಿಸ್ತರಿಸಿಕೊಳ್ಳುತ್ತಾ, ಸಂಕುಚಿತಕೊಳ್ಳುತ್ತಾ, ಸುಮಾರು 770 ಕಿ. ಮೀ. ಗಳನ್ನು ಕ್ರಮಿಸಿ, ಕಟ್ಟ ಕಡೆಗೆ ತಾನು ಜನಿಸಿದ ಗಾತ್ರದಷ್ಟೇ ಬಂಗಾಳ ಕೊಲ್ಲಿಯಲ್ಲಿ ಲೀನವಾಗುವಳು ಪೂಜ್ಯ ಮಾತೆ ಶ್ರೀ ಕಾವೇರಿ. - ಜೈ ಕಾವೇರಿ ಮಾತೆ.

- ಪಟ್ಟಡ ಪ್ರಭಾಕರ್.

ಕನ್ನಡದ ಮೊದಲ ಶಬ್ಧ - ಇಸಿಲ

## *ಶುಭ ಹಾರೈಕೆ :* "ಪುಣ್ಯ ವಧು - ವರರ ಅನ್ವೇಷಣಾ ಕೇಂದ್ರ ಸುಂಟಿಕೊಪ್ಪ"



1. ಸುಂಟಿಕೊಪ್ಪದ ಕೊಡಗರ ಹಳ್ಳಿ ಗ್ರಾಮದ ಅಯ್ಯಟಿ ದಿ|| ರಾಮಪ್ಪನವರ ಪುತ್ರ ಚಂದ್ರಶೇಖರ್ ಹಾಗೂ ನೆಲ್ಲಿ ಹುದಿಕೇರಿಯ ತೆರಂಬಳ್ಳಿ ದುರ್ಗೇಶ್‌ರವರ ಪುತ್ರಿ ಚಂದ್ರಲೇಖಾ ಇವರ ವಿವಾಹವೂ ತಾರೀಖು 9-5-2002 ರಂದು ಕುಶಾಲನಗರದ ಗೌಡ ಸಮಾಜದಲ್ಲಿ ವಿಜೃಂಭಣೆಯಿಂದ ನಡೆಯಿತು.

2. ಸೋಮವಾರಪೇಟೆಯ ಕಡವಡಿರ ಕುಂಞಪ್ಪನವರ ಪುತ್ರ ಮುತ್ತಣ್ಣ ಹಾಗೂ ನಂಜರಾಯ ಪಟ್ಟಣದ ಕೇಕಡ ದಿ|| ರಾಮಯ್ಯನವರ ಪುತ್ರಿ ಭವಿತ ಇವರ ವಿವಾಹವೂ ತಾರೀಖು 17-5-200 ರಂದು ಕುಶಾಲನಗರ ಗೌಡ ಸಮಾಜದಲ್ಲಿ ವಿಜೃಂಭಣೆಯಿಂದ ನಡೆಯಿತು.

3. ಅಂದಗೋವೆಯ ನಿವಾಸಿ ದಿವಾಕರ್ ಅವರ ಪುತ್ರ ರಾಜೀವ್ ಹಾಗೂ ಮಡಿಕೇರಿಯ ನಿವಾಸಿ ಮಾದವನವರ ಪುತ್ರಿ ಸಾವಿತ್ರಿ ಇವರ ವಿವಾಹವು ತಾರೀಖು 30-5-2002 ರಂದು ಮಡಿಕೇರಿಯ ಕೂರ್ಗ್ ಕಮ್ಯುನಿಟಿ ಹಾಲ್‌ನಲ್ಲಿ ವಿಜೃಂಭಣೆಯಿಂದ ನಡೆಯಿತು.

4. ಹೆರವನಾಡಿನ ಕಾಸ್ಪಾಡಿ ದಿ|| ಸೋಮಯ್ಯನವರ ಪುತ್ರಿ ಸುಧಾ ಮತ್ತು ಸುಂಟಿಕೊಪ್ಪದ ಯಂಕನ ಸೋಮಯ್ಯನವರ ಪುತ್ರ ಕಿಶೋರ್‌ಕುಮಾರ್ ಇವರ ವಿವಾಹವು ತಾರೀಖು 22-5-2002 ರಂದು ಮಡಿಕೇರಿಯ ಓಂಕಾರೇಶ್ವರ ದೇವಸ್ಥಾನದಲ್ಲಿ ವಿಜೃಂಭಣೆಯಿಂದ ನಡೆಯಿತು.

5. ಮಡಿಕೇರಿಯ ಮುಕ್ಕಾಟಿ ವಾಸುದೇವ್ ಅವರ ಪುತ್ರಿ ರೇಖಾ ಹಾಗೂ ಕುಶಾಲನಗರದ ಪೊಡನೋಳನ ಬೆಳ್ಯಪ್ಪನವರ ಪುತ್ರ ನಂದ ಇವರ ವಿವಾಹವೂ ತಾರೀಖು 13-6-2002 ರಂದು ಮಡಿಕೇರಿಯ ಮೇಲಿನ ಕೊಡವ ಸಮಾಜದಲ್ಲಿ ವಿಜೃಂಭಣೆಯಿಂದ ನಡೆಯಿತು.

6. ಮಡಿಕೇರಿಯ ಮೂಟೆ ಚಂಗಪ್ಪನವರ ಪುತ್ರಿ ಲೀನಾ ಹಾಗೂ ಮೈಸೂರಿನ ವಿಜಯನಗರದಲ್ಲಿ ವಾಸವಿರುವ ಹರಗ ಪೂವಯ್ಯನವರ ಪುತ್ರ ನಂದ ಇವರ ವಿವಾಹವು ತಾರೀಖು 14-6-2002 ರಂದು ಮಡಿಕೇರಿಯ ಮೇಲಿನ ಗೌಡ ಸಮಾಜದಲ್ಲಿ ವಿಜೃಂಭಣೆಯಿಂದ ನಡೆಯಿತು.

7. ಭಾಗಮಂಡಲ ನಾಡು ಕರಿಕೆ ಗ್ರಾಮದ ಹೊಸ ಮನೆ ಮುತ್ತಪ್ಪನವರ ಪುತ್ರಿ ಮೀನಾಕ್ಷಿ ಹಾಗೂ ಚೇಲವಾರ ಗ್ರಾಮದ ಬೊಳ್ಳುಮನೆ ಬೆಳ್ಯಪ್ಪನವರ ಪುತ್ರ ಅನಂದ್ ಇವರ ವಿವಾಹವೂ ತಾರೀಖು 26-6-2002ರಂದು ವಧುವಿನ ಸ್ವಗ್ರಹದಲ್ಲಿ ವಿಜೃಂಭಣೆಯಿಂದ ನಡೆಯಿತು.

*ನಮ್ಮ ಸಂಸ್ಥೆಯ ಮೂಲಕ ಒಂದಾದ ಈ ಎಲ್ಲಾ ನವ ದಂಪತಿಗಳಿಗೆ ಶುಭ ಕೋರುವ,*

**ಶ್ರೀಮತಿ ಕಡ್ಯರ ರತಿ ಅರುಣ್‌ಕುಮಾರ್ "ಪುಣ್ಯ" ವಧು-ವರರ ಅನ್ವೇಷಣಾ ಕೇಂದ್ರ ಸುಂಟಿಕೊಪ್ಪ.**

**ದೂರವಾಣಿ 08276 - ಕಛೇರಿ, 62083, ಮನೆ - 62252.**

## ಪ್ರಥಮ ರ್‍ಯಾಂಕ್ ವಿಜೇತ



ಮೈಸೂರು ವಿಶ್ವ ವಿದ್ಯಾನಿಲಯದ 2001-02 ನೇ ಸಾಲಿನ B.P.Ed., ಪರೀಕ್ಷೆಯಲ್ಲಿ ಪೊನ್ನಚನ ಶ್ರೀನಿವಾಸ್‌ರವರು ಪ್ರಥಮ ರ್‍ಯಾಂಕ್ ಪಡೆದಿರುತ್ತಾರೆ.

ಇವರು ಮೂಲತ: ಕೊಡಗಿನ ಬಲಮುರಿ ಗ್ರಾಮದವರಾಗಿದ್ದು ಪ್ರಸ್ತುತ ಮಡಿಕೇರಿಯಲ್ಲಿ ನೆಲೆಸಿದ ಇವರು ಪೊನ್ನಚನ ಕಾಳಪ್ಪ ಹಾಗೂ ರಾಧ ದಂಪತಿಯರ ಮೂವರು ಮಕ್ಕಳಲ್ಲಿ ಕೊನೆಯವರಾಗಿದ್ದು ಅವರ ಏಕ ಮಾತ್ರ ಪುತ್ರರಾಗಿರುತ್ತಾರೆ.

ಇವರು ತಮ್ಮ ಪ್ರಾಥಾಮಿಕ ಶಿಕ್ಷಣವನ್ನು ನಗರದ ಸಂತ ಮೈಕಲರ ಶಾಲೆಯಲ್ಲಿಯೂ ಪ್ರೌಢ ಶಿಕ್ಷಣವನ್ನು ಗುಲ್ಬರ್ಗಾ ಹಾಗೂ ಬೆಂಗಳೂರಿನ ಕ್ರೀಡಾನಿಲಯದಲ್ಲಿ ಮುಗಿಸಿ, ಮಡಿಕೇರಿಯ ಫೀಲ್ಡ್ ಮಾರ್ಷಲ್ ಕೆ. ಎಂ. ಕಾರ್ಯಪ್ಪ ಕಾಲೇಜಿನಲ್ಲಿ ತಮ್ಮ ಪದವಿಯನ್ನು ಪಡೆದು ಬಿ. ಪಿ. ಎಡ್. ಪದವಿಯನ್ನು ಮೈಸೂರು ವಿಶ್ವ ವಿದ್ಯಾನಿಲಯದಲ್ಲಿ ಮುಗಿಸಿರುತ್ತಾರೆ.

ಇವರು ಉತ್ತಮ ಕ್ರೀಡಾಪಟುವಾಗಿದ್ದು ಫುಟ್‌ಬಾಲ್ ಮತ್ತು ಅಥ್ಲೇಟಿಕ್‌ಗಳಲ್ಲಿ ರಾಜ್ಯ ಹಾಗೂ ಮೈಸೂರು ಮತ್ತು ಮಂಗಳೂರು ವಿಶ್ವ ವಿದ್ಯಾನಿಲಯವನ್ನು ಮೂರು ಬಾರಿ ಪ್ರತಿನಿಧಿಸಿದ್ದು ಕ್ರೀಡೆಗಳಲ್ಲಿ ಹಲವಾರು ಪ್ರಶಸ್ತಿಗಳನ್ನು ಗಳಿಸಿರುತ್ತಾರೆ.

ರಾಜ್ಯ ಅಥ್ಲೇಟಿಕ್ ಮಿಟ್‌ಗಳಲ್ಲಿ ಅಧಿಕಾರಿಯಾಗಲು Karnataka Amateur Athletic Association ವತಿಯಿಂದ ನಡೆಸಿದ S.T.O. (State Technical Official in Athletic) ಪರೀಕ್ಷೆಯನ್ನು ಪಾಸ್ ಮಾಡಿ Athletics ಅಧಿಕಾರಿಯಾಗುವ ಅರ್ಹತೆಯನ್ನು ಗಳಿಸಿರುವರು. ಪ್ರಸ್ತುತ ಇವರಿಗೆ K.S.P. ಯಲ್ಲಿ ಸೇವೆ ಸಲ್ಲಿಸುವ ಅವಕಾಶ ದೊರೆತಿದ್ದು ಮುಂದೆ ತಮ್ಮ Physical Education ರಂಗದಲ್ಲಿ ಸೇವೆ ಸಲ್ಲಿಸುವ ಅವಕಾಶ ದೊರೆತಲ್ಲಿ ಆ ರಂಗದಲ್ಲಿ ಮುಂದುವರೆದು ಉತ್ತಮ ಸಾಧನೆಯನ್ನು ಮಾಡಬೇಕೆಂಬ ಬಯಕೆಯನ್ನು ಇಟ್ಟುಕೊಂಡಿರುತ್ತಾರೆ.

-ಸಂಗಾತಿ.

## ಸೌಜನ್ಯ ಮೂರ್ತಿ ಶ್ರೀ ಪಿ. ಜಿ. ಅಂಬೆಕಲ್



ಚೆಟ್ಟಳ್ಳಿ ಪ್ರೌಢ ಶಾಲೆಯಲ್ಲಿ ಮುಖ್ಯ ಶಿಕ್ಷಕರಾಗಿದ್ದ ಶ್ರೀ ಅಂಬೆಕಲ್ ಜಿ. ಪುಟ್ಟಣ್ಣನವರು ಈ ವರ್ಷದ ಜುಲೈ 31 ರಂದು ನಿವೃತ್ತರಾದರು. ಕನ್ನಡ ಅಧ್ಯಾಪಕರಾಗಿದ್ದ ಶ್ರೀಯುತರು ಸಾಹಿತಿಯೂ ಹೌದು. ಅವರ ಪತ್ನಿ ಶ್ರೀಮತಿ ಕನಕಾಂಗಿ ಸಣ್ಣ ಕಥೆಗಾರ್ತಿ. ಅವರ ಕಡೆಯ ಮಗಳು ಕುಮಾರಿ ಜಾಹ್ನವಿ ಸಹ ಸಾಹಿತ್ಯದತ್ತ ಒಲವು ಇಟ್ಟುಕೊಂಡಿದ್ದಾಳೆ.

ಪಿ. ಜಿ. ಅಂಬೆಕಲ್ ಎಂದರೆ ಸೌಮ್ಯ ಸ್ವಭಾವಕ್ಕೆ ಮತ್ತೊಂದು ಹೆಸರು ಎಂದರೆ ತಪ್ಪಾಗಲಿಕ್ಕಿಲ್ಲ. ಸುಳ್ಯ ಹುಟ್ಟೂರು. ನಿವೃತ್ತ ಜೀವನ ಕೊಡಗಿನಲ್ಲಿ. ಇವರು ಇಂಟರ್ ಮೀಡಿಯಟ್ ಶಿಕ್ಷಣವನ್ನು ಭೂಪಾಲ್‌ನಲ್ಲಿ ಪಡೆದರು. ಮೈಸೂರಿನ ರೀಜನಲ್ ಕಾಲೇಜ್ ಅಫ್ ಎಜುಕೇಶನ್ ಸಂಸ್ಥೆಯಲ್ಲಿ ಬಿ. ಇಡಿ., ಪದವಿಯನ್ನು, ಮೈಸೂರಿನ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆಯಲ್ಲಿ ಎಂ. ಎ. ಪದವಿಯನ್ನು ಪಡೆದುಕೊಂಡರು. ಇವರ ಉದ್ಯೋಗ ಮತ್ತು ಶಿಕ್ಷಣ ಜೊತೆ ಜೊತೆಯಲ್ಲಿಯೇ ಸಾಗಿದ್ದು, ವಿಶೇಷವಾಗಿದೆ. ಪ್ರಾರಂಭದಲ್ಲಿ ಇವರು ವಿಟ್ಲದ ಪದವಿಪೂರ್ವ ವಿದ್ಯಾಲಯ ಮತ್ತು ಅದೇ ಸಂಸ್ಥೆಯ ಬಾಲಿಕಾ ಪ್ರೌಢ ಶಾಲೆಯಲ್ಲಿ ಗುಮಾಸ್ತರಾಗಿ ಸೇವೆಗೆ ಅಡಿ ಇಟ್ಟವರು.

ನಂತರ ಕೊಡಗಿಗೆ ಆಗಮಿಸಿ ಚೆಟ್ಟಳ್ಳಿ ಪ್ರೌಢ ಶಾಲೆಯಲ್ಲಿ ಸಹ ಶಿಕ್ಷಕರಾಗಿ ಸೇವೆಗೆ ಸೇರಿದರು. ಕೊನೆಯ ಎಂಟು ವರ್ಷಗಳ ಕಾಲ ಮುಖ್ಯ ಶಿಕ್ಷಕರಾಗಿ ಅದೇ ಶಾಲೆಯಲ್ಲಿ ಬಡ್ತಿ ಪಡೆದರು. ಹೀಗೆ ಒಟ್ಟು 33 ವರ್ಷಗಳ ಕಾಲ ಸೇವೆ ಸಲ್ಲಿಸಿ ಇಂದು ನಿವೃತ್ತ ಜೀವನ ಸಾಗಿಸುತ್ತಿದ್ದಾರೆ.

ಇವರ ತಂದೆ ವೆಂಕಪ್ಪಗೌಡ, ತಾಯಿ ರಾಮಕ್ಕ, ಇವರಿಬ್ಬರೂ ಇಂದಿಲ್ಲ. ಇವರ ಪತ್ನಿ ಶ್ರೀಮತಿ ಕನಕಾಂಗಿ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಈ ನಡುವೆ ಕನಕಾಂಗಿಯವರು ಅನಾರೋಗ್ಯದಿಂದ ಬಳಲುತ್ತಿದ್ದು ಬೆಂಗಳೂರಿನಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾರೆ. ಇವರ ಹಿರಿಯ ಪುತ್ರಿ ನಿವೇದಿತಾ ಆಯುರ್ವೇದ ವೈದ್ಯಕೀಯದ ಅಂತಿಮ ವರ್ಷದ ವಿದ್ಯಾರ್ಥಿನಿ. ನಡುವಿನ ಮಗಳು ಅಲಕ, ಈಕೆ ಮೊದಲ ವರ್ಷದ ಬಿ. ಬಿ. ಎಂ. ವಿದ್ಯಾರ್ಥಿನಿ. ಕೊನೆಯ ಮಗಳು ಜಾಹ್ನವಿ ಚೆಟ್ಟಳ್ಳಿ ಪ್ರೌಢ ಶಾಲೆಯಲ್ಲಿ 10 ನೇ ತರಗತಿಯ ವಿದ್ಯಾರ್ಥಿನಿ.

ಸಾಹಿತ್ಯಾಸಕ್ತ ಅಂಬೆಕಲ್ ಕುಟುಂಬ ಒಂದು ಉತ್ತಮ ಬದುಕನ್ನು ಕಾಣಲಿ. ಶ್ರೀಮತಿ ಕನಕಾಂಗಿಯವರ ಆರೋಗ್ಯ ಆದಷ್ಟು ಬೇಗ ಸುಧಾರಿಸಲಿ. ಆ ಮೂವರು ಕುವರಿಯರು ಉತ್ತಮ ವಿದ್ಯಾಭ್ಯಾಸ ಪಡೆದು ಉದ್ಯೋಗ ಪಡೆಯಲಿ ಶುದ್ಧ ಹಸ್ತದ ಶ್ರೀ ಪ. ಜಿ. ಅಂಬೆಕಲ್ ಅವರ ನಿವೃತ್ತ ಜೀವನ ಸುಖಮಯವಾಗಿರಲೆಂದು ನಾವೆಲ್ಲರೂ ಹಾರೈಸೋಣ.

ಬಿ. ಆರ್. ಜೋಯಪ್ಪ, ಮದೆ.

11ನೇ ಪುಟದಿಂದ

ಆದರೆ ಭಾಷೆ ಬಗ್ಗೆ ಜುಗುಟುತನ (Regid) ಬೇಡವೆಂದು ತಿಳಿಸಿದರು. ಇನ್ನೊಬ್ಬ ಅತಿಥಿ ಪಟ್ಟಡ ಪ್ರಭಾಕರನವರು ಭಾಷೆ, ಸಂಸ್ಕೃತಿ, ನಮ್ಮ ನೆಲೆಗಟ್ಟುಗಳ ಹತ್ತು ಹಲವು ವಿಷಯಗಳ ಬಗ್ಗೆ ಬೆಳಕು ಚೆಲ್ಲಿದರು. ಸಂಗಾತಿ ಪತ್ರಿಕೆಯು ಜನಾಂಗದ ಬಂಧುಗಳಿಗೆ ಯಾವ ರೀತಿ ಉಪಯೋಗವಾಗುತ್ತಿದೆ ಅನ್ನುವ ಸೂಕ್ಷ್ಮ ಅಂಶವನ್ನು ಸಹ ತಿಳಿಸಿದರು. ಅದನ್ನು ಪ್ರತಿಯೊಬ್ಬರು ಕೊಂಡು ಓದಿದಲ್ಲೂ ಇಂದಿನ ಸಂಗಾತಿ ಬರಹಗಾರರೇ ಮುಂದೆ ಜನಾಂಗಕ್ಕೆ ಶ್ರೀ ರಕ್ಷೆಯಾಗುವರೆಂದು, " ಒಂದು ಜನಾಂಗದ ಅಭಿವೃದ್ಧಿಯೇ ಒಂದು ದೇಶದ ಪ್ರಗತಿ" ಯೆಂಬು ದರಲ್ಲಿ ನಮಗೆ ಸಂಪೂರ್ಣ ನಂಬಿಗೆಯಿದೆಯೆಂದು ವ್ಯಾಖ್ಯಾನಿಸಿದರು.

ಸಭಾಧ್ಯಕ್ಷತೆಯನ್ನು ವಹಿಸಿಕೊಂಡ ಮಾಜಿ ಜಿಲ್ಲಾ ಪಂಚಾಯತ್ ಅಧ್ಯಕ್ಷರಾದ ಶ್ರೀ ಊರುಬೈಲು ಪ್ರಕಾಶ್‌ರವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಹಾಸನ ಜಿಲ್ಲಾ ದ. ಕ. ಕೊಡಗು ಗೌಡ ಸಂಘದ ಚಟುವಟಿಕೆ ಬಗ್ಗೆ ಸಂತೋಷ ವ್ಯಕ್ತ ಪಡಿಸುತ್ತಾ ಇಂತಹ ಬೆಳವಣಿಗೆಯು ಜನಾಂಗದ ಅಭಿವೃದ್ಧಿಯ ಸಂಕೇತವೆಂದು ಪೊನ್ನಣ್ಣ ಮತ್ತು ಪದಾಧಿಕಾರಿಗಳು ತಮ್ಮತ್ತ ಧಾವಿಸಿಬಂದಾಗ ಖಂಡಿತವಾಗಿಯೂ ನಮ್ಮ ಕೈಲಾದ ತನು, ಮನ, ಧನ, ಸಹಕಾರವನ್ನು ನೀಡಲು ತಯಾರಾಗಿದ್ದೇವೆ ಎಂದು ಭರವಸೆಯಿತ್ತರು. ರೈತರಿಗಿಂತ ಉದ್ಯೋಗವಾಸಿ ಕೃಷಿಗೆ ಬೆಲೆ ಇಲ್ಲ ಅಲ್ಲದೆ, ಕಾಫಿ/ಏಲಕ್ಕಿ/ಬರಗಾಲ ಈ ಹಿಂದೆ ನಮ್ಮ ಜನಾಂಗದ ಚಿತ್ರಣವಿರುವುದರಿಂದ ಅದರ ಮೇಲೆಯೇ ಬದುಕುತ್ತಿರುವ ಇಂದಿನ ಪರಿಸ್ಥಿತಿಯಲ್ಲಿ ಕಷ್ಟ ಸಾಧ್ಯವಾದರು, ಏಕತೆಯಿಂದ ಸಮಗ್ರತೆಯಿಂದ ದುಮ್ಮುಕ್ಕುವ ತಾಕತ್ತು ಇದ್ದರೆ ಖಂಡಿತ ಸಾಧ್ಯವೆಂದರು. ಉತ್ತಮ ನಾಯಕತ್ವ ಕೊರತೆ ನಮ್ಮ ಹಿನ್ನಡೆಗೆ ಕಾರಣವೆಂದು ಪ್ರತಿಕ್ರಿಯಿಸಿದರು. ಪೊನ್ನಣ್ಣನವರಲ್ಲಿ ಈ ಎಲ್ಲಾ ಅಂಶವಿರುವುದರಿಂದ ಅವರ ಸಾರಥ್ಯಕ್ಕೆ ಕೈ ಜೋಡಿಸುವುದು ನಮ್ಮ ನಿಮ್ಮೆಲ್ಲರ ಆದ್ಯ ಕರ್ತವ್ಯವೆಂದರು.

ದಿನದ ಕ್ರೀಡಾ ಕೂಟದಲ್ಲಿ ಚಿಕ್ಕ ಮಕ್ಕಳಿಗೆ ಕಾಳು ಹೆಕ್ಕುವುದು, 50, 100 ಮೀಟರ್ ಓಟ, ಸೂಜಿಗೆ ದಾರ ಪೋಣಿಸುವುದು, ಕುರ್ಚಿ ಆಟ, ಕಾಯಿಗೆ ಕಲ್ಲು ಹೊಡೆಯುವುದು,ಬಾರದ ಕಲ್ಲು ಎಸೆತ ಇತ್ಯಾದಿಗಳಲ್ಲಿ ಅಭಾಲ ವೃದ್ಧರಾಗಿ ಮಹಿಳೆಯರು ಸಹ "ಕೈಲ್ ಪೋಳ್ದು" ಕ್ರೀಡಾಕೂಟದಲ್ಲಿ ಭಾಗಿಯಾಗಿದ್ದು ಮುದ ತರುವ ವಿಚಾರವಾಗಿತ್ತು. ಅತಿಥಿಗಳಿಂದ ಗೆದ್ದವರಿಗೆ ಬಹುಮಾನ ವಿತರಿಸಲಾಯಿತು.ಇದೆ ಸಂದರ್ಭದಲ್ಲಿ ಕುಪ್ಪತಡ್ಕ ಪದ್ಮಯ್ಯ ಭಾಗೀರಥಿ ದಂಪತಿಗಳ "ತ್ರಿ ಕನ್ಯೆ"ಯರಾದ ಮಾನಸ, ನೀತ, ನಿರೂಪ ಇವರುಗಳು ತಮ್ಮನ್ನು ಅಥ್ಲೆಟಿಕ್ಸ್‌ನಲ್ಲಿ ತೊಡಗಿಸಿಕೊಂಡಿದ್ದು, ಈ ಮೂವರು ಸಹೋದರಿಯರು ಜಿಲ್ಲಾ ಮಟ್ಟದ ಚಾಂಪಿಯನ್ಸ್ ಅಲ್ಲದೆ ಹಾಕಿಯಲ್ಲಿ ರಾಜ್ಯ ಮಟ್ಟಕ್ಕೆ ಆಯ್ಕೆಯಾಗಿ ಮುಂದೆ ಬಾಗಲಕೋಟೆಯಲ್ಲಿ ನಡೆಯಲಿರುವ ಮಟ್ಟದ ಹಾಕಿ ಕೂಟದಲ್ಲಿ ಪಾಲ್ಗೊಳ್ಳುವರು. ಇವರಿಗೂ ಸಹ ಸನ್ಮಾನ ನೀಡಿ ಶುಭ ಹಾರೈಸಿದರು. ಈ ತ್ರಿಕನ್ನೆಯರಿಗೆ ಉತ್ತಮ ಪ್ರೋತ್ಸಾಹ, ಸಿಕ್ಕಿದಲ್ಲಿ ರಾಷ್ಟ್ರವನ್ನು ಪ್ರತಿನಿಧಿಸುವ ಕಾಲ ದೂರವಿಲ್ಲವೆಂದೆನ್ನಬೇಕು.

ಸಭೆ ಕಾರ್ಯಕ್ರಮವನ್ನು ಕೂಡೆಕಲ್ಲು ಲೋಕನಾಥನವರು ಸಭೆಯನ್ನು ನಿರೂಪಿಸಿ ವಂದನಾರ್ಪಣೆ ಗೈದರು.

-ಸಂಗಾತಿ.

ಕನ್ನಡದ ಮೊದಲ ಗದ್ಯ ಗ್ರಂಥ - ವಡ್ಡಾರಾಧನೆ

# ನನ್ನ ಮಾವ ದೇವಿ ಪ್ರಸಾದ್

ಜಗತ್ತಿನ ಶ್ರೇಷ್ಠ ಸಂಪತ್ತು ಮಾನವನ ವ್ಯಕ್ತಿತ್ವದಲ್ಲಿ ಅಡಗಿದೆ ಎಂಬ ನಂಬಿಕೆಯನ್ನು ಹೊಂದಿರುವ ಸಂಸ್ಥೆಯಾದ ಜೇಸೀಸ್ ಸಂಸ್ಥೆಗೆ ನನ್ನ ತಾತ ದಿ|| ಸಣ್ಣಯ್ಯರವರ ವ್ಯಕ್ತಿತ್ವ ಮತ್ತು ಅವರ ಪ್ರಭಾವದಿಂದ ತನ್ನದೇ ಆದ ಶಿಸ್ತು ಪ್ರಮಾಣಿಕತೆಗಳಿಂದ ವ್ಯಕ್ತಿತ್ವ ರೂಪಿಸಿ ಕೊಂಡು ಶೀರ್ಥರೂಪದ ಆದರ್ಶಗಳಾದ ಸ್ಫೂರ್ತಿ ಜೇಪೀ ವಾಣಿಯಿಂದ ಆಕರ್ಷಿತನಾಗಿ ಸೇರಿದೆ. ನನ್ನ ಮಾವ ದೇವಿ ಪ್ರಸಾದರಂತೂ ನನ್ನ ಬಾಲ್ಯದ ದಿನಗಳಿಂದಲೇ ನನ್ನ ಜೀವನಕ್ಕೆ ಸ್ಫೂರ್ತಿಯಾದರು. ಹತ್ತಿರ ಹರೆಯದಲ್ಲಿದ್ದಾಗ ತಾಯಿಯ ತವರಿನ ಉಪ್ಪರಿಗೆಯ ಕೋಣೆಯಲ್ಲಿ ಸಾಲಾಗಿ ಜೋಡಿಸಿ ನೇತಾಡಿಸಿದ್ದ ಅವರ ಡಜನ್‌ಗಟ್ಟಲೆ ಟೈಕೋಟುಗಳನ್ನು ಸ್ಪರ್ಶಿಸಿ ದಿಗ್ಭ್ರಮೆ ಗೊಳ್ಳುತ್ತಿದ್ದುದು ಅವರ ಕಾಲೇಜಿನ ದಿನಗಳ ವೈಭವದಲ್ಲಿ ಮಹರಾಜ ಕಾಲೇಜಿನ ಯುವ ರಾಜನಂತೆ ಮೆರೆಯಲು ಅವರಿಗಿದ್ದ ಒಂದು 'ಸಾರೋಟು' ಅದನ್ನು ಕೊಳ್ಳಲೆಂದೇ ಅವರ ಸ್ನೇಹಿತರನ್ನು ಸದಾ ಜತೆಗಿರಿಸಿಕೊಳ್ಳುತ್ತಿದ್ದ ರಂಗಿನ ಕತೆಗಳು ಅವರು ನನ್ನ ಪಾಲಿನ 'ಹೀರೋ' ಆಗಿ ಮನದಲ್ಲಿ ಆರಾಧ್ಯರಾಗಿ ಪ್ರತಿಷ್ಠಾಪಿಸಲ್ಪಟ್ಟರು. ಆಗಿನ ಹೀರೋಗಳಾದ ಕಲ್ಯಾಣ್ ಕುಮಾರ್, ಉದಯಕುಮಾರ್, ರಾಜ್‌ಕುಮಾರ್, ಹಿಂದಿಯ ರಾಜೇಂದ್ರ ಕುಮಾರ್, ರಾಜ್‌ಕಪೂರ್, ಶಮ್ಮಿಕಪೂರ್‌ಗಳಿಗಿಂತ ಸುಂದರಾಂಗ ನನ್ನ ಮಾವನಾಗಿದ್ದದ್ದು. ಅವರನ್ನು ನನ್ನ ಫ್ಯಾಂಟಿಸಿಯಲ್ಲೂ, ವಾಸ್ತವಿಕವಾಗಿಯೂ ಹೀರೋ ಎಂದೇ ಭಾವಿಸಿದವನು. ಅದು ಇಂದಿಗೂ ಬದಲಾಗಿಲ್ಲ. ದೇವಿ ಪ್ರಸಾದರವರು ನನ್ನ ಸೋದರ ಮಾವ. ಶ್ರೀಮಂತಿಕೆಯಲ್ಲಾಗಲಿ ಅವರು ಅಪಾರ ಸಂಪರ್ಕ ಮತ್ತು ಪ್ರಭಾವ ವುಳ್ಳವರೆಂದಾಗಲೀ ಅವರನ್ನು ನಾವು ಹಚ್ಚಿಕೊಂಡಿಲ್ಲ. ಕುಟುಂಬದ ಬಂಧು ಬಳಗದ ಪ್ರತಿಯೊಬ್ಬರೊಡನೆ ಅವರು ನಡೆದುಕೊಳ್ಳುವ ರೀತಿ ಹೊಂದಿಕೊಳ್ಳುವ ಸ್ವಭಾವ, ತೋರುವ ವಾತ್ಸಲ್ಯ ಇನ್ನೊಬ್ಬರಲ್ಲಿ ನಾನು ಕಂಡಿಲ್ಲ. ಇವರು ಪ್ರಥಮವಾಗಿ ವಿದೇಶ ಪ್ರಯಾಣ ಮಾಡಿದ್ದು ಸಿಂಗಾಪುರಕ್ಕೆ ಆಗ ನಾನಿನ್ನೂ ಕಡ್ಡಿ ಪೆನ್ಸಿಲ್‌ನಲ್ಲಿ ಬರೆಯುವ ವಿದ್ಯಾರ್ಥಿ ನನಗೆ ಅವರು ತಂದದ್ದು Hero Ball pen, ಸ್ಟೀಲ್ ಕ್ಯಾಪಿನದು. ಅದೆಂತಹ ಅದ್ಭುತ. ನನ್ನ ಅಣ್ಣನಿಗೆ ನೇಂದ್ರ ಚಿಪ್ಸ್‌ನಷ್ಟು ತೆಳ್ಳಗಿನ ಫೇವರಲೂಬ ವಾಚ್.

ನಾನು ಹೈಸ್ಕೂಲ್ ಕಟ್ಟೆ ಹತ್ತುವಷ್ಟರಲ್ಲಿ ಅವರು ವಿವಾಹವಾದರು. ಅದು ಸರಳ ವಿವಾಹ. ಕಬಿಯಲ್ಲಿ ನನ್ನ ಜೀವನದ ಅತ್ಯುತ್ತಮ ಬಟ್ಟೆ ಖ್ಯಾತ ಎಂಪಾಸೈರ್ ಟೈಲರ್‌ನಲ್ಲಿ ಹೊಲಿಸಿಕೊಟ್ಟಿದ್ದು ಅವರೆ, ಅವರು ಹೀಗೆ ಪ್ರೀತಿ ವಾತ್ಸಲ್ಯ ದೊಂದಿಗೆ ನನ್ನನ್ನು ಕಾಣುತ್ತಿದ್ದರೋ ಅದೇ ರೀತಿ ಈಗ ನನ್ನ ಮತ್ತು ತಂಗಿಯ ಮಕ್ಕಳನ್ನು ಕಾಣುತ್ತಿದ್ದಾರೆ. ಅವರ ವಯಸ್ಸಿನ ಭಾವನೆಗಳಿಗೆ ತನ್ನದಾಗಿ ತಮ್ಮನ್ನು ಮಕ್ಕಳ ಮನಸ್ಸಿನಂತೆ ತಿಳಿದು ವ್ಯವಹರಿಸುತ್ತಾರೆ. ಇದು ಅವರ ವೈಶಿಷ್ಟ್ಯ.

ನನ್ನ ಮದುವೆಯ ಬಗ್ಗೆ ಇನ್ನಿಲ್ಲದ ಸಂಭ್ರಮ ಸಡಗರ ಪಟ್ಟವರು ಅವರು. ವಧು ಅನ್ವೇಷಣೆಯಿಂದ ತೊಡಗಿ ಮಧು ಚಂದ್ರಕ್ಕೆ ತೆರಳುವವರೆಗೆ ಅವರದ್ದೇ ನಿರ್ದೇಶನ ಸಲಹೆಗಳು. ನನ್ನನ್ನು ಒಬ್ಬ ಭಾಷಣಕಾರನಾಗಿ ರೂಪಿಸುವಲ್ಲಿ ನನ್ನ ಅಣ್ಣಂದಿರಿಬ್ಬರೊಡನೆ ಇತರರಿಗೂ ಮಹತ್ತರ. ಅನೇಕರಿಗೆ ಆಶ್ಚರ್ಯವಾಗಬಹುದಾದರೂ ನನ್ನನ್ನು ರಾಜಕೀಯಕ್ಕೆ ಪ್ರೇರೆಪಿಸಿದ ಮೊದಲಿಗರು ಇವರೇ. ದಿವಂಗತ ಎಂ. ಆರ್. ಜನಾರ್ಧನ್ ವಕೀಲರು, ಗೌಡ ಸಮ್ಮೇಳನದ ಬಳಿಕ ನಾನು ರಾಜಕೀಯ ಸೇರಬೇಕೆಂದು ಸಲಹೆ ಮಾಡಿ ಪತ್ರ ಬರೆದಿದ್ದರು, ಸಹಧರ್ಮಿಣಿಯ ಸಹನೆ ಇಲ್ಲದೆ, ರಾಜಕಾರಣಿಗಳು ವಿಫಲರಾದ ಅನೇಕ ಉದಾಹರಣೆಯನ್ನು ನೀಡಿ ನನ್ನ ಪತ್ನಿ ನನ್ನ ರಾಜಕೀಯ ಚಟುವಟಿಕೆಗಳಿಗೆ ಅಡ್ಡಿಯಾಗದಂತೆ ಮಾಡಿದ್ದು ಇವರ ದೂರದರ್ಶಿತ್ವ. ಜಪಾನ್ ಪ್ರವಾಸ ಮಾಡಿದಾಗ ಅಲ್ಲಿಂದ ಬರೆದ ಪತ್ರವನ್ನು ಜೋಪಾನವಾಗಿ ಇಟ್ಟುಕೊಂಡಿದ್ದೇನೆ. ಅವರ ಬರವಣಿಗೆಯ ಶೈಲಿ ಒಂದು ಸುಂದರ ಸಂಭಾಷಣೆಯ ರೂಪ ದಲ್ಲಿದ್ದುದನ್ನು ಮುಂದೆ ಅವರು ಅದೇ ಶೈಲಿಯನ್ನು ಬಳಸ ಬೇಕೆಂದು ಕೇಳಿಕೊಂಡಿದ್ದೆ. ಗೋರೂರರ ಪ್ರವಾಸ ಸಾಹಿತ್ಯದಷ್ಟೇ ಪರಿಣಾಮಕಾರಿ ಬರಹ ಅವರಿಗೆ ಸಾಧ್ಯ ಎಂಬ ನಂಬಿಕೆ ನನ್ನದು.

ಗೌಡ ಸಮ್ಮೇಳನ ನಡೆಸಲು ಅಂದು ಗೌಡ ವಿದ್ಯಾಸಂಘದ ಅಧ್ಯಕ್ಷರಾಗಿದ್ದ ಶ್ರೀ ಅಂಬೆಕಲ್ಲು ಮುತ್ತಯ್ಯ ಗೌಡರು ನಿರ್ಧರಿಸಿದಾಗ ಶ್ರೀ ದೇವಿ ಪ್ರಸಾದರು ಅಧ್ಯಕ್ಷರು. ಅವರ ನೇಪಥ್ಯದಲ್ಲಿ ನಾವೆಲ್ಲರೂ ರಾತ್ರಿ ಹಗಲು ದುಡಿದೆವು. ಸಮಾರಂಭದ ಹಿಂದಿನ ದಿನ ಇವರನ್ನು ಹೊಳೆ ನರಸೀಪುರಕ್ಕೆ ಮುಖ್ಯ ಅತಿಥಿಗಳನ್ನು ಕರೆತರಲು ನಿಯೋಜಿಸಲಾಗಿತ್ತು. ಸ್ವಾಗತ ಸಮಿತಿ ಅಧ್ಯಕ್ಷರಾಗಿದ್ದು ಇದನ್ನು ಒಪ್ಪಿಕೊಂಡದ್ದು ಅವರದ್ದು ದೊಡ್ಡತನವೇ... ದಡ್ಡತನವೇ? ನನಗಿನ್ನೂ ಸ್ಪಷ್ಟವಾಗಿಲ್ಲ. ಆದರೂ ಮುಂಜಾನೆ ಆರು ಗಂಟೆಗೆ ಹೇಗೊ ಏನೋ ವಾಪಾಸಾಗಿ "ನಭೋತೋ ನಭವಿಷ್ಯೆತೀ" ಎಂಭಂತೆ ನಡೆದ ಸಮ್ಮೇಳನದ ರೂವಾರಿ ಶ್ರೀ ಕುರುಂಜಿ ವೆಂಕಟ್ರಮಣ ಗೌಡರ ಷಷ್ಟಬ್ದಕ್ಕೂ ಇವರೇ ಚಾಲನಾ ಶಕ್ತಿ. ಅವರು ಅಧ್ಯಕ್ಷರು, ನಾನು ಕಾರ್ಯ ದರ್ಶಿ. ಸುಳ್ಯದಲ್ಲಿ ನಡೆದ ಅಪೂರ್ವ ಕಾರ್ಯಕ್ರಮಗಳಲ್ಲಿ ಇದು ಒಂದು. ಮನೆಮನೆ, ಅಂಗಡಿ ಮುಂಗಟ್ಟುಗಳನ್ನು ಬಿಡದೆ ಇವರು ಸಂದರ್ಶಿಸಿಸಿ ಕಾರ್ಯಕ್ರಮದ ಯಶಸ್ಸಿಗೆ ಪರಿಶ್ರಮ ವಹಿಸಿದರು.

ರಾಜಕೀಯ ಸಹಕಾರ ಮತ್ತು ಜನಾಂಗದ ಅಭಿವೃದ್ಧಿ ಕಾರ್ಯಗಳಿಗೆ ತನು ಮನ, ಧನಗಳಿಂದ ತನ್ನನ್ನು ಸವೆಸಿದರೂ ಸೂಕ್ಷ್ಮ ರೀತಿಯಲ್ಲಿ ಇವರನ್ನು ಈ ಕ್ಷೇತ್ರಗಳಲ್ಲಿ ಗುರುತಿಸಿದಂತೆ ಕಾಣದಾಗ ಸಾಹಿತ್ಯಾಚರಿತ್ರೆ, ನಾಟಕ ಸಿನಿಮಾದ ಗೀಳು ಹಚ್ಚಿಕೊಂಡರು. ಅಲ್ಲೂ ಇವರದೇ ಛಾಯೆ ಒತ್ತಿ ಯಶಸ್ವಿಯಾದರು. ಅವರೊಬ್ಬ ಅತ್ಯುತ್ತಮ ವ್ಯಂಗ್ಯ ಚಿತ್ರಕಲಾವಿದರೆಂಬುದು ಅನೇಕರಿಗೆ ತಿಳಿದಿರಲಾರದು. ಬಡವರಿರಲಿ, ಶ್ರೀಮಂತರಿರಲಿ, ಔತಣವಿರಲಿ, ಅಂಬಲಿ ಊಟವಿರಲಿ ಅನ್ನದ ಅಗುಳು ಬಿಡದೆ ಸ್ವಾದವನ್ನು ಸವಿದು

ಸಂತೃಪ್ತಿ ಪಡುವದೊಂದು ಇವರ ವಿಶೇಷ ಗುಣ.

ಇವರು ವಹಿಸಿಕೊಂಡ ಎಲ್ಲಾ ಜವಾಬ್ದಾರಿಗಳನ್ನು ನಿರ್ವಹಿಸಲು ಅವರೊಂದಿಗೆ (ಅಳಿಯಂದಿರುಗಳು) ಸದಾ ಇದ್ದೇವೆ. ಇರುತ್ತೇವೆ, ಅದಕ್ಕಾಗಿ ಅನೇಕರು ಅವರನ್ನು ಅದೃಷ್ಟವಂತರೆಂದು ಕರೆಯುವವರಿದ್ದಾರೆ. ನಮ್ಮಲ್ಲೂ 'ನಿಮ್ಮ ಸೋದರ ಮಾವನಂತವರು' ನಮಗಿಲ್ಲವೆಂದು ಹೇಳಲೂ ಮರೆಯುವುದಿಲ್ಲ. ಕೆ. ಎಸ್. ಟೈಲರ್ ತಂಡವನ್ನು 70 ರ ದಶಕದಲ್ಲಿ 80 ರಲ್ಲಿ ಪ್ರಭಾತ್ ಕಲಾವಿದರು 90 ರಲ್ಲಿ ಮಾಲತಿ, ನಾಗೇಶ್, ಮುಂತಾದ ಕಲಾವಿದರನ್ನು, ಸೋಮಶೇಖರ್ ಮುಂತಾದ ಖ್ಯಾತರನ್ನು ಇವರಷ್ಟೇ ಆಕರ್ಷಿಸಬಲ್ಲರು. ಮಾವನ ಬಗ್ಗೆ ಅನೇಕರಿಗೆ ತಿಳಿದಿರುವ ಸರಳ ಸತ್ಯಗಳು ಅನೇಕವಿದೆ. ಅಂಕಣ ಸೀಮಿತವಾಗಿರುವುದರಿಂದ ಅಸಹಾಯಕನಾಗಿದ್ದೇನೆ. ಅವರ ಧರ್ಮಪತ್ನಿ ಶ್ರೀಮತಿ ಇಂದಿರಾ ಪ್ರೀತಿ ವಾತ್ಸಲ್ಯ, ಸ್ಫೂರ್ತಿಗಳ ಚಿಲುಮೆ,

ನಾನಿನಗೆ ನೀನೆನಗೆ ಜೇನಾಗುವಾ
ರಸ ಜೀವ ಗಂಗೆಯಲಿ ಮೀನಾಗುವಾ
ಹೂವಾಗುವ ಹಣ್ಣಾಗುವ
ರತಿ ರೂಪಿ ಭಗವತಿಗೆ ಮುಡಿಪಾಗುವಾ

ಎಂಬ ರಾಷ್ಟ್ರಕವಿ ಕುವೆಂಪುರವರ ಕವನವನ್ನು ನೆನಪಿಸುತ್ತಾರೆ. ಅವರಿಗೆ 60 ವರ್ಷ ಆದರೂ, ನಮ್ಮ ಹೀರೋ ಸದಾ ಹೀರೋ. ಅವರ ಹಾಸ್ಯ ಪ್ರೀತಿ, ಬತ್ತಿ ಹೋಗಿಲ್ಲ. ಒತ್ತಡ ವಯಸ್ಸು ಆರೋಗ್ಯ ಭಾವನೆಗಳು ಬದಲಾಯಿಸಿಲ್ಲ. ನಮ್ಮ ಸಂಸಾರ ವ್ಯವಹಾರ ಹೆಚ್ಚುತ್ತಾ ಕಂದರ ಅಂತರ ಹೆಚ್ಚಿದರೂ ಅವರ ಮೇಲಿನ ಪ್ರೀತಿ ಅಭಿಮಾನ, "ಆರಾಧ್ಯ ಸ್ಥಾನ' ಸದಾ ಮೀಸಲು.

- ಮುಗಿಯಿತು.

*ವಿಶೇಷ ಸೂಚನೆ:* ಸಂಪಾಜೆ ದೇವಿಪ್ರಸಾದರ **"60ರ ಷಷ್ಟ್ಯಬ್ದ"** ಪ್ರಯುಕ್ತ ಎಲ್ಲಾ ಲೇಖನವನ್ನು ಓದುಗರಿಗೆ ಮತ್ತು ಹಿತೈಷಿಗಳಿಗೆ ಸವಿಸ್ತಾರವಾಗಿ ನೀಡಿದ್ದೇವೆ. ಅವರ ಆದರ್ಶ, ಮಾದರಿ ಜೀವನವು ಅವರಿಗಲ್ಲದೆ, ಅವರ ಹಿತಶತ್ರುಗಳು ಯಾರಾದರು ಇದ್ದಲ್ಲಿ, ಅವರಲ್ಲಿ ಕೆಲವರಿಗಾದರು ಓದಿದ ನಂತರ ಮನವರಿಕೆಯಾಗಿ ಪೂರ್ತಿ ಪರಿಚಯವಾಗಿ, ಪ್ರೀತಿಯ ಸೆಲೆಯೊಡೆದು ಸಹಬಾಳ್ವೆ ಯೊಂದಿಗೆ ಇರುವಂತಾಗಲೆಂಬುದೆ ನಮ್ಮ ಇಚ್ಛೆಯಾಗಿದೆ.

- ಸಂಪಾದಕಿ.

## *ನಗೆ ಹನಿಗ*

ಗುರು : ಉತ್ತು, ಆಮದ್ ಮತ್ತೆ ರಫ್ತಿಗೆ ಒಂದೊಂದ್ ಉದಾಹರಣೆ ಕೊಟ್ಟೆಯಾ?

ಉತ್ತು : ಅದೇನ್ ವಿಶ್ಯ ಸಾರ್, ಸೊಸೆ ಮತ್ತೆ ಮಗ್ಳು.

- ಕುಂಜಿಲನ ನವೀನ್ ಚಿಣಪ್ಪ, ಪುತ್ತೂರು

# ಕಾಡ್ಲಿರುವ ವೀರಪ್ಪನ್ ?!!

ಬೀಗ್‌ಬ್ಯಾಡ ಗತ್ತ್, ಗಮ್ಮತ್ತ್‌ಲಿ
ನನ್ನನ್ಯಾರೂ ಹಿಡಿಯಕ್ಕಿಲೆತಾ
ದಶಃದಶಕಗಳ ಕಳ್ಳತನಕ್ಕೆ ಅಂತ್ಯವುಟ್ಟು
ಅದ್‌ಕ್ಕಾಗಿ ದಿನವೊಂದು ಧಾವಿಸಿ ಬರ್ತಾ ಉಟ್ಟು?!

ನೀ ನಂದು ಹುಟ್ಟಿ ಬಂದೆ
ಸಣ್ಣ ಹೈದಾಗಿರ್‌ನೇ ಕಳ್ಳರ ಬಲೆಗೆ ಬಿದ್ದೆ
ಒಮ್ಮೆ ನೀ ಆರಕ್ಷಕರಿಗೆ ಸಿಕ್ಕಿ ಬಿದ್ದೆ
ನಿನ್ನದೃಷ್ಟ ಅಲ್ಲಿಂದ್ಲೂ ತಪ್ಪಿಕಂದ್ ಎದ್ದೆ!!

ಎದ್ದ ನೀ ಮತ್ತೆ ಬಿದ್ದತ್ಲೆ
ಗಜನ ಹೊಡ್‌ತಕ್ಕೆ ಸಿಕ್ಕರೂ ನೀ ಸತ್ತತ್ಲೆ
ಮದ ಗಜದಂತೆ ನಡ್ದೆ ನೀ ಕಾಡ್ಲಿ
ಬೀಸಿದ್ರೂ ಬಿದ್ದತ್ಲೆ ನೀ ಸರಕಾರದ ಬಲೇಲಿ!

ನಿನ್ನ ಕಾಡ್ ಮೀಸೆನ ಕಂಡ್
ಹೆದ್ರಿ ಕಂಡವುಯೆಷ್ಟೋ
ನಿನ್ನ ಕೈಲಿದ್ದ ಕೋವಿ ನೋಡಿ
ನಡ್‌ಗಿ ಅಡ್‌ಗಿಕೊಂಡವುಯೆಷ್ಟೋ!

ನಿನ್ನಟ್ಟಿಸಿಕೊಂಡ್ ಬಂದವ್‌ಕೆ
ನೀ ನೀಡ್ದೆ ಸಾವುನ ಬಿಕ್ಷೆ
ಇಷ್ಟೆಲ್ಲಾ ಆದ್ರೂ ನಿನ್ನ ಹತ್ರ ಸುಳ್‌ದತ್ಲೆ
ನೀ ಅನುಭವಿಸಬೇಕಾದ ಶಿಕ್ಷೆ?!

ಪಂಚಕೋಟಿ ಜನ್ರ ಅಮೂಲ್ಯ ಮುತ್ತು
ಅಂದ್ ನಿನ್ನತ್ತ ಜಾರಿ ಬಿದ್ದಿತ್
ಪುನಃ ಅಪಹರಣಕ್ಕೆ ಕೈ ಹಾಕೋಳ
ಇಂದ್ ಏರಿಟ್ಟು ಅಲಾ ಆಗಾದ ಮತ್ತ್?!

ಅಂದು ನಿನ್ನಿಂದ ಹತರಾದವ್ರ ಪ್ರೇತ ಕೂಗ್ತಾಉಟ್ಟು
ಅವರಾಪ್ತರ ದೇಹ ನರಳ್ತಾಉಟ್ಟು
ಗೆದ್ದ್ ಬುಟ್ಟೆತಾ ನೀ ಬೀಗ್‌ಬ್ಯಾಡ
ವ್ಯಸನ ಪಡ್ಪು ಕಾಲ ಹತ್ರ ಬರ್ತಾ ಉಟ್ಟು
ಮರಿಬ್ಯಾಡ

-"ಶಿಪ್ರ" ಕೊಡಗು.

ಕಡ್ಯದ ಚುಂಡಯ್ಯ ಮತ್ತು ಸರೋಜ ದಂಪತಿಗಳು



## ಷಷ್ಟ್ಯಬ್ಧ ಶುಭಾಶಯಗಳು

ನಮ್ಮ ದೊಡ್ಡಪ್ಪನವರಾದ ಶ್ರೀಯುತ ಕಡ್ಯದ ಚುಂಡಯ್ಯನವರ 60 ವರ್ಷದ (26-8-1942) ಮತ್ತು ದೊಡ್ಡಮ್ಮನವರಾದ ಶ್ರೀಮತಿ ಕಡ್ಯದ ಸರೋಜ ಚುಂಡಯ್ಯನವರ ಹುಟ್ಟು ಹಬ್ಬಕ್ಕೆ ನಮ್ಮೆಲ್ಲರ ತುಂಬು ಹೃದಯದ ಹಾರ್ದಿಕ ಶುಭಾಶಯಗಳು. ಇವರ ದಾಂಪತ್ಯ ಜೀವನಕ್ಕೆ ಶ್ರೀ ಕುಲ ಗುರು ವೆಂಕಟರಮಣಸ್ವಾಮಿಯು ಆರೋಗ್ಯ ಮತ್ತು ಯಶಸ್ಸಿಯನ್ನು ನೀಡಲೆಂದು ಶುಭ ಹಾರೈಸುವ.

*ಕಡ್ಯದ ರಾಜೇಶ್ (ನಂದ) ಮತ್ತು ಕಡ್ಯದ ಬೀನಾ ರಾಜೇಶ್, ಮೈಸೂರು.*

---



ಕೊಡಗು ಜಿಲ್ಲೆ ಮಡಿಕೇರಿ ತಾಲ್ಲೂಕು ಹೊಸ್ಕೇರಿ ಗ್ರಾಮದ ಕರ್ಣಯ್ಯನ ಚಿಣ್ಣಪ್ಪ ಮತ್ತು ಭವಾನಿಯವರುಗಳ ಮಗಳು ಮಮತ (ಮಾಲ) ಇವರು ಕಳೆದ ಸಾಲಿನ 2001-2002 ಮತ್ತು 2003 ನೇ ಸಾಲಿನ ದೇರಜಿ ಕುಟುಂಬಸ್ತರ ಕೆಸರುಗದ್ದೆ ಓಟದಲ್ಲಿ 2 ಬಾರಿಯು ದ್ವಿತೀಯ ಸ್ಥಾನವನ್ನು ಗಳಿಸಿದ್ದು ಈ ವರ್ಷದ ಕಗ್ಗೋಡ್ಲು ರಾಜ್ಯ ಮಟ್ಟದ ಕೆಸರು ಗದ್ದೆ ಓಟದಲ್ಲಿ ದ್ವಿತೀಯ ಸ್ಥಾನವನ್ನು ಗಳಿಸಿ ಮನೆಯವರಿಗೂ ಮತ್ತು ಊರಿನವರಿಗೂ ಹೆಮ್ಮೆಯನ್ನು ತಂದಿದ್ದು ಇವರು ಮಡಿಕೇರಿ ಕಿರಿಯ ಸಂತ ಮೈಕಲ್‌ರ ಆಂಗ್ಲ ಮಾಧ್ಯಮ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದು, ಶಾಲೆಗ ಒಳ್ಳೆಯ ಹೆಸರನ್ನು ತಂದಿದ್ದು, ಇವರ ಮುಂದಿನ ಭವಿಷ್ಯಕ್ಕೆ ಕುಲುಗುರುವೆಂಕಟರಮಣ ಹಾಗೂ ಗುರುಹಿರಿಯರ ಆಶೀರ್ವಾದಗಳಿಂದಲೂ ಇವರ ಭವಿಷ್ಯವು ಉತ್ತಮವಾಗಿ ಸಾಗಲಿ ಎಂದು ಹಾರೈಸುವೆವು.

*ವರದಿ : ಎಂ. ಕೆ. ಜನಾರ್ಧನ್*

---

## ವಾಯು ದಳದ ಏರ್‌ಮನ್ ಟೆಕ್ನಿಕಲ್ ಹುದ್ದೆಗೆ ಅರ್ಜಿ ಆಹ್ವಾನ

ಭಾರತೀಯ ವಾಯುದಳದ ಖಾಲಿ ಇರುವ ಏರ್‌ಮನ್ ಟೆಕ್ನಿಕಲ್ (ಗ್ರೂಪ್ ಎಕ್ಸ್) ಹುದ್ದೆಗಳಿಗೆ ಅರ್ಹ ಪುರುಷ ಅಭ್ಯರ್ಥಿಗಳಿಂದ ಅರ್ಜಿ ಪುರುಷ ಅಭ್ಯರ್ಥಿಗಳಿಂದ ಅರ್ಜಿ ಆಹ್ವಾನಿಸಲಾಗಿದೆ.

ಅಭ್ಯರ್ಥಿಗಳು ಪಿಯುಸಿಯಲ್ಲಿ ಭೌತ ಶಾಸ್ತ್ರ, ಗಣಿತಶಾಸ್ತ್ರ, ಆಂಗ್ಲ ಭಾಷೆಯಲ್ಲಿ ಶೇ. ೫೦ ಅಂಕಗಳಿಸಿರಬೇಕು. ಡಿಪ್ಲೊಮಾ ಇಂಜಿನಿಯರಿಂಗ್ (ಮೆಕ್ಯಾನಿಕಲ್, ಎಲೆಕ್ಟ್ರಾನಿಕ್ಸ್, ಆಟೋಮೊಬೈಲ್, ಕಂಪ್ಯೂಟರ್ ಸೈನ್ಸ್, ಮೆಂಟೇಶನ್ ಟೆಕ್ನಾಲಜಿ) ನಲ್ಲಿ ಉತ್ತೀರ್ಣರಾಗಿರಬೇಕು.

ಅಭ್ಯರ್ಥಿಯು ಕನಿಷ್ಠ ೧೫೭.೫ ಸೆ. ಮೀ. ಎತ್ತರವಿರಬೇಕು. ಹಾಗೂ ಎದೆಯ ಸುತ್ತಳತೆ ೭೫ ಸೆಂ. ಮೀ. ಇರಬೇಕು. ಜುಲೈ ೧, ೧೯೮೨ ರಿಂದ ಜೂನ್ ೧, ೧೯೮೮ರ ಅವಧಿಯಲ್ಲಿ ಜನಿಸಿದವರಾಗಿರಬೇಕು. ಅಭ್ಯಾರ್ಥಿಗಳನ್ನು ಲಿಖಿತ ಪರೀಕ್ಷಕ್ಷೆ ಮೂಲಕ ಆಯ್ಕೆ ಮಾಡಲಾಗುವುದು.

ಭರ್ತಿ ಮಾಡಿದ ಅರ್ಜಿಯೊಡನೆ ಈ ಭಾವಚಿತ್ರ, ಸ್ವ ವಿಳಾಸದ ೫ ರೂ. ಸ್ಟಾಂಪ್ ಹಚ್ಚಿದ ಲಕೋಟೆ, ವಿದ್ಯಾರ್ಹತೆಯ ಅಂಕ ಪಟ್ಟಿ ಲಗತ್ತಿಸಿ ಅಕ್ಟೋಬರ್ ೨೧ ರೊಳಗೆ ಪ್ರೆಸಿಡೆಂಟ್, ಸೆಂಟ್ರಲ್ ಏರ್‌ಮನ್ ಸೆಲೆಕ್ಷನ್ ಬೋರ್ಡ್, ಪಿ. ಬಿ. ನಂ. ೧೧೮೦೭ ಹೊಸ ದೆಹಲಿ ೧೧೦೦೧೦ ಇಲ್ಲಿಗೆ ಕಳುಹಿಸಬೇಕು.

ಉಚಿತ ಅರ್ಜಿ ನಮೂನೆ ಹಾಗೂ ಹೆಚ್ಚಿನ ಮಾಹಿತಿಗೆ ಮೈಸೂರು ಜಿಲ್ಲಾ ಉದ್ಯೋಗ ವಿನಿಮಯ ಕಛೇರಿಗಳನ್ನು ಸಂಪರ್ಕಿಸುವಂತೆ ಉದ್ಯೋಗಾಧಿಕಾರಿಗಳು ಪ್ರಕಟಣೆಯಲ್ಲಿ ತಿಳಿಸಿದ್ದಾರೆ.

---



ಕೊಡಗನ ಚಂದ್ರಮ್ಮ
ಜನನ : 13-4-1943
ಮರಣ : 25-9-1997

## ಐದನೇ ವರ್ಷದ ಪುಣ್ಯಸ್ಮರಣೆ

*ನೀನು ನನ್ನನ್ನಗಲಿ ನಾಲು ವರ್ಷಗಳೇ ಕಳೆದರೂ ಸದಾ ನಿನ್ನ ಒಡನಾಟದ ನೆನಪಿನಲ್ಲಿರುವ,*

ನಿನ್ನ ಪತಿ, ಎಂ. ರಾಮೇಗೌಡ,
ಮುಖ್ಯೋಪಾಧ್ಯಾಯರು, ವಿಶ್ವೇಶ್ವರಯ್ಯ ಪ್ರೌಢಶಾಲೆ
ಕ್ಯಾತನಹಳ್ಳಿ, ಪಾಂಡವಪುರ ತಾಲ್ಲೂಕು, ಮಂಡ್ಯಜಿಲ್ಲೆ.

*ವಿಳಾಸ*
ನಂ.251, ಹೆಬ್ಬಾಳ್, 1ನೇ ಫೇಸ್ ಲೋಕನಾಯಕ ನಗರ,
ಮೈಸೂರು - 570 016 Ph : 512049

---

ಚೇಯಪ್ಪನ ಪ್ರವೀಣ್ ಸೋಮಯ್ಯ



ಮರಣ : 29-9-93

## ಚಿರಸ್ಮರಣೆ

ಮುದ್ದಿನ ಪ್ರವೀಣ್, ಅರಳುವ ಮುನ್ನವೇ ಬಾಡಿಹೋದ ಹೂವಿನಂತೆ, ನಮ್ಮನ್ನಗಲಿ ಇಂದಿಗೆ 9 ವರ್ಷ ಕಳೆಯಿತು. ಆದರೂ ಪ್ರತಿ ದಿನವೂ ನಿನ್ನ ನೆನಪಿನಲ್ಲಿಯೇ ಇರುತ್ತಾ, ಆ ಭಗವಂತನು ಅಗಲಿದ ನಿನ್ನ ದಿವ್ಯಾತ್ಮಕ್ಕೆ ಚಿರಶಾಂತಿಯನ್ನು ಕರುಣಿಸಲೆಂದು ಪ್ರತಿ ದಿನವೂ ಬೇಡುವ,

*ನಿನ್ನ ಪ್ರೀತಿಯ ಅಮ್ಮ*
*ಚೇಯಪ್ಪನ ಪುಷ್ಪಾವತಿ ಸೋಮಯ್ಯ*
*ಅಣ್ಣ, ಸತೀಷ್ ಸೋಮಯ್ಯ,*
*ಅಕ್ಕಂದಿರಾದ ಉಷಾ, ಪುಟ್ಟು ಮತ್ತು ಆಶಾ, ಮಂಜು.*

**Reg. No. KA/SK/MYS-88** **Registered : 10-01-96 TCI Kar. 09592**

ದಂಬೆಕೋಡಿ ರಾಮಕ್ಕ ಸುಬ್ರಾಯ



## 12 ನೇ ವರ್ಷದ ಪುಣ್ಯಸ್ಮರಣೆ

ನೀವು ಈ ಭೌತಿಕ ಪ್ರಪಂಚವನ್ನು ತ್ಯಜಿಸಿ 12ವರ್ಷಗಳೇ ಸಂದರೂ ನಿಮ್ಮಪ್ರೀತಿ, ವಾತ್ಸಲ್ಯ ಮಮಕಾರ, ಸ್ನೇಹಮಯ, ಸಹಬಾಳ್ವೆಯ ಸವಿನೆನಪು ಆಗಿಂದಾಗ್ಗ್ಯೆ ಮರುಕಳಿಸುತ್ತಿದ್ದು, ನಿಮ್ಮ ದಿವ್ಯಾತ್ಮಕ್ಕೆ ಆ ಭಗವಂತನು ಚಿರಶಾಂತಿಯನ್ನು ಅನುದಿನವು ನೀಡಲೆಂದು ಪ್ರಾರ್ಥಿಸುವೆವು.

ಜನನ : 11-4-1916
ಮರಣ : 13-10-1991

*ಮಕ್ಕಳು, ಸೊಸೆಯಂದಿರು, ಅಳಿಯಂದಿರು,*
*ಮೊಮ್ಮಕ್ಕಳು, ಮರಿ ಮಕ್ಕಳು.*
*ಚೇರಳ, ಶ್ರೀಮಂಗಲ*, Ph : 08276/66640

**ರಾಜ್ಯದ ಅಂತರವಲಯ (Under 25) ಕ್ರಿಕೆಟ್ ಟೂರ್ನಮೆಂಟ್.**
**"ಎಸ್. ಎ. ಶ್ರೀನಿವಾಸನ್ ಟ್ರೋಪಿ", ಮೈಸೂರು ವಲಯ ಚಾಂಪಿಯನ್ಸ್.**
**ಬೆಂಗಳೂರಿನ ಚಿನ್ನಸ್ವಾಮಿ ಕ್ರೀಡಾಂಗಣದಲ್ಲಿ 19-8-2002 ರಿಂದ 9-9-2002ತನಕ ನಡೆಯಿತು.**



ಪೋಟೊದ ಬಲತುದಿಯಲ್ಲಿ : ಪಟ್ಟಡ ದೀಪಕ್ ಪ್ರಭಾಕರ್
ಪೋಟದ ಎಡತುದಿಯಲ್ಲಿ : ಕೊಡಗನ ಚಂದನ್ ಬಾಲಕೃಷ್ಣ



ದಿ॥ ಸುಭೇದಾರ್ ಅಪ್ಪೈಯ್ಯ ಗೌಡರು

## ಚಿರಸ್ಮರಣೆ

ಕೊಡಗಿನ ಮಂಣಿನಲ್ಲಿ ಪ್ರಥಮ ಸ್ವಾತಂತ್ರ್ಯ ಕಿಡಿ ಹೊತ್ತಿಸಿದ ದಿ॥ ಸುಭೇದಾರ್ ಗುಡ್ಡೆ ಮನೆ ಅಪ್ಪೈಯ್ಯಗೌಡರು. ಜನನ : ಅಂದಾಜು 1793 , ಮರಣ : 31-10-1837.

ಭವ್ಯ ಭಾರತದ ಇತಿಹಾಸದಲ್ಲಿ ಸ್ಮರಣೆಯಾಗಬೇಕಿದ್ದವರು, ಆದರೆ ಇಂದು............??? 165 ವರ್ಷಗಳ ಹಿಂದೆ ಅಂದರೆ 31-10-1837 ರಂದು ಮಡಿಕೇರಿ ಕೋಟೆಯ ಬಾವಿ ಕಟ್ಟೆಯ ಆವರಣದಲ್ಲಿ ಸ್ಥಳೀಯರ ಮತ್ತು ಬ್ರಿಟಿಷರ ಕುತಂತ್ರದಿಂದ ಗಲ್ಲಿಗೇರಿದ ಕೊಡಗಿನ ಸ್ವಾತಂತ್ರ್ಯದ ಪ್ರಥಮ ರೂವಾರಿ, ಹರಿಕಾರ, ಕ್ರಾಂತಿವೀರ, ಗೌಡರ ಗೌಡ, ಕೊಡಗಿನ ಸುಪುತ್ರ ದಿ॥ ಸುಭೇದಾರ್ ಗುಡ್ಡೆಮನೆ ಅಪ್ಪೈಯ್ಯಗೌಡರು.

ಇವರಿಗೆ "ಹತ್ತು ಕುಟುಂಬ ಹದಿನೆಂಟು ಗೋತ್ರದ" ಸಮಸ್ತ ಅರೆಗನ್ನಡ ಭಾಷಿಕರ ಶ್ರದ್ಧಾಂಜಲಿಗಳು"

*ಉಹಾಚಿತ್ರ : ಪಟ್ಟಡ ಪ್ರಭಾಕರ, ಪ್ರಕಟಣೆ : ಕೊಡಗು ಸಂಗಾತಿ, ಮೈಸೂರು.*

**Kodagu Sangathi** Kannada Fortnightly Edited, Published, Printed by **Pattada Sheelamani, 1055c, Doddanna Buildings, Hunsur Road, Hinkal Post, Mysore-570017. ☎ : 0821/404290.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ☎ : 0821/431792.